# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

ರಿ.ನಂ. ಕೆ.ಆರ್.ಎನ್. ಸಂಪುಟ : 1 ಸಂಚಿಕೆ : 3 ಮೇ 1 ರಿಂದ 15–1997 ಪುಟಗಳು : 26 ರೂ. 5

ಮಿಸ್ "ಮಹಾರಾಣಿಸ್"ಯಾಗಿ (1996 - 97)

ಕುಕ್ಕುನೂರು ಮೃದುಲಾ ಗೋಪಾಲ, ಮೈಸೂರು.

ಉತ್ತಮ ಗುಣಮಟ್ಟದ ಲಗ್ನ ಪತ್ರಿಕೆಗಳು, ಗ್ರೀಟಿಂಗ್ಸ್‌ಗಳು,

ವಿಸಿಟಿಂಗ್ ಕಾರ್ಡ್ಸ್, ಕರಪತ್ರಗಳು, ಬಿಲ್ ಪುಸ್ತಕಗಳು

ಇತ್ಯಾದಿಗಳ ಅಂದವಾದ ಮತ್ತು ಅತೀ ಶೀಘ್ರದ

ಮುದ್ರಣಕ್ಕಾಗಿ ಒಮ್ಮೆ ಭೇಟಿ ಕೊಡಿ !!



# ಆಶೀರ್ವಾದ್ ಪ್ರಿಂಟರ್ಸ್

ನಂ. 180/ಎ, ಪಟೇಲ್ ಉಗ್ರೇಗೌಡರ ಕಾಂಪ್ಲೆಕ್ಸ್, 6ನೇ ಮುಖ್ಯ ರಸ್ತೆ,
ವಿನಾಯಕನಗರ, ಮೈಸೂರು-570012.

ಮಾಲೀಕರು : ಮಂಞ್ಞಂಡ್ರ ಕುಂಞ್ಞಪ್ಪ ತಮ್ಮಯ್ಯ

ಹಾಗೂ

**"ಕೊಡಗು ಸಂಗಾತಿ"ಗೆ ಶುಭ ಕೋರುವ....**

ಶ್ರೀ ಮಂಞ್ಞಂಡ್ರ ಬೆಳ್ಯಪ್ಪ ಕುಂಞ್ಞಪ್ಪ
ಶ್ರೀಮತಿ ಮತ್ತು ಶ್ರೀ ಮಂಞ್ಞಂಡ್ರ ಕುಂಞ್ಞಪ್ಪ ಗೋಪಾಲ ಮತ್ತು ಮಕ್ಕಳು
ಶ್ರೀಮತಿ ಮತ್ತು ಶ್ರೀ ಮಂಞ್ಞಂಡ್ರ ಕುಂಞ್ಞಪ್ಪ ಈರಪ್ಪ ಮತ್ತು ಮಕ್ಕಳು
ಶ್ರೀಮತಿ ಮತ್ತು ಶ್ರೀ ಮಂಞ್ಞಂಡ್ರ ಕುಂಞ್ಞಪ್ಪ ಕುಟ್ಟಪ್ಪ ಮತ್ತು ಮಕ್ಕಳು
ಶ್ರೀಮತಿ ಮತ್ತು ಶ್ರೀ ಸವಿತಾ ಈಶ್ವರ ಮತ್ತು ಮಕ್ಕಳು
ಶ್ರೀಮತಿ ಗಂಗಮ್ಮ ಉಲ್ಲಾಸ್ ಮತ್ತು ಮಕ್ಕಳು.

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :
**ಹುಲಿಮನೆ ಪಿ. ರಮೇಶ್**

ಪ್ರಸಾರ ವ್ಯವಸ್ಥಾಪಕ :
**ಪಟ್ಟಡ ಎಲ್. ಶಿವಕುಮಾರ್**

ಕಛೇರಿ ನಿರ್ವಹಣೆ :
**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**

ಮುದ್ರಣ :
**ಎಂ.ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
ವಿನಾಯಕನಗರ, ಮೈಸೂರು-12

ಗೌರವ ವ್ಯವಸ್ಥಾಪಕ :
**ಪಟ್ಟಡ ಎಂ. ಪ್ರಭಾಕರ್**

ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 322, ಬೋಗಾದಿ ಸರ್ಕಲ್,
ಹಿನಕಲ್ ಪೋಸ್ಟ್, ಮೈಸೂರು–17

## ಒಳನೋಟ

ಪುಟಗಳು



### ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ :–

ಸಂಸ್ಕೃತಿಗಳು ಉದ್ಭವಿಸುವುದೇ ಹಳ್ಳಿಯಿಂದ. ಗ್ರಾಮ ಮಟ್ಟದಲ್ಲಿ ಸಂಸ್ಕೃತಿಗೆ ಹೆಚ್ಚು ಒತ್ತು ಕೊಟ್ಟಾಗ ಮಾತ್ರ ಅದು ಬೆಳಕಿಗೆ ಬರುತ್ತದೆ. ಕೋಲಾಟ, ಬೆಳಕಾಟ, ಬಯ ಲಾಟ, ಹುತ್ತರಿ ಹಾಡುಗಳು, ಜೋಗಿ ಹಾಡುಗಳು, ಸುಗ್ಗಿ, ಸಿದ್ದವೇಷ ಕುಣಿತ ಇತ್ಯಾದಿ ಕ್ರಮಗಳನ್ನು ಗಮನಿಸಿದಾಗ ಇವುಗಳನ್ನು ಸಂಪ್ರದಾಯದ ಉಡುಪಿ ನಲ್ಲೆ ನಡೆಸಿದಾಗ ಅದನ್ನು ನೋಡಲು ಎರಡು ಕಣ್ಣುಗಳೇ ಸಾಲದು. ಎಷ್ಟೊಂದು ಅಂದ. ಹೀಗೆ ಕಾರ್ಯಕ್ರಮ ಗಳನ್ನು ಹಮ್ಮಿಕೊಂಡಾಗ ಜನರು ಒಗ್ಗೂಡಿ ದುಡಿದು ಅವರವರ ಮಟ್ಟದಲ್ಲಿ ಸ್ನೇಹ, ಒಗ್ಗಟ್ಟು, ಒಂದುಗೂಡಿ ದಾಗ ಅದು ಬಲಿಷ್ಟ ಸಮಾಜವಾಗಬಲ್ಲುದು. ಇದರಿಂದ ಗ್ರಾಮ ಉದ್ದಾರವಾಗಿ ತನ್ಮೂಲಕ ದೇಶ ಸೇವೆ ಮಾಡು ವುದಕ್ಕೆ ಅನುವು ಮಾಡಿಕೊಟ್ಟಂತಾಗುತ್ತದೆ ಅಲ್ಲವೆ ?

ಐದು ಸಂವತ್ಸರಗಳಿಗೊಮ್ಮೆಯಾದರು ಅಖಿಲ ರಾಜ್ಯಮಟ್ಟದಲ್ಲಿ ಕೊಡಗು ಮತ್ತು ದ.ಕ. ಜಿಲ್ಲಾ ಗೌಡರ ಸಮ್ಮೇಳನವು ನಡೆಯಬೇಕು. ಹರಿಸೇವೆ, ದೈವಕೋಲ ಇತ್ಯಾದಿ ಕಾರ್ಯಕ್ರಮಗಳು ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸುವಂತಾಗಬೇಕು. ಹರಿಸೇವೆ 5 ವರ್ಷಗಳಿ ಗೊಮ್ಮೆಯಾದರು ಸಮುದಾಯ ಭವನದಲ್ಲಿ ನಡೆಯುವ ಏರ್ಪಾಡು ಮಾಡಿದಾಗ ಎಲ್ಲರು ಒಂದೆಡೆ ಸೇರುವುದ ರೊಂದಿಗೆ ಬಲಿಷ್ಠ ಸಂಘಟನೆಗೆ ನಾಂದಿಯಾದಿತು.

ಕೊಡಗಿನ ಸುಮಾರು 273 ಗ್ರಾಮಗಳಿಂದ ನೇರ ವಾಗಿ ಕೊಡಗು ಗೌಡರ ಪ್ರತಿನಿಧಿಗಳಿರಬೇಕು. ವಿದ್ಯಾ ಸಂಘ, ಸಮಾಜ, ಅಭಿವೃದ್ಧಿ ಸಂಘಗಳು ಇದರಲ್ಲಿ ಸಕ್ರಿ ಯವಾಗಿ ಪಾಲ್ಗೊಳ್ಳಬೇಕಾಗಿದೆ. ಸಂಘ ಸಂಸ್ಥೆಗಳಲ್ಲಿ ಯುವ ಪೀಳಿಗೆಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಾಗ ಬಿರುಸಿನ ದುಡಿಮೆ, ಚಟುವಟಿಕೆ ಶ್ರಮದ ಅಲೆಯೊಂದಿಗೆ ಲವಲವಿಕೆಯನ್ನು ಇಲ್ಲಿ ಕಾಣಬಹುದಾಗಿದೆ.

## ನಾಯಿ ಮಾಂಸ ಮಾರುವ ಹೊಟೇಲ್ !

ದಕ್ಷಿಣ ಕೊರಿಯಾದ ಜನತೆಗೆ ನಾಯಿ ಮಾಂಸ ಈಗ ಮತ್ತೆ ಲಭ್ಯವಾಗಿದೆ. ಇಲ್ಲಿನ ಚೊಯಾಂಗ್ ಸಾಪ್ ಎಂಬುವ ರು ನಾಯಿ ಮಾಂಸದ ಹೋಟೆಲ್ ಒಂದನ್ನು ಆರಂಭಿಸಿದ್ದಾರೆ. ಈ ಹಿಂದೆ 1980ರಲ್ಲಿ ಕೊರಿಯ ಸರ್ಕಾರ ನಾಯಿಮಾಂಸ ವನ್ನು ನಿಷೇಧಿಸಿ ಆದೇಶ ಹೊರಡಿಸಿತ್ತು. 1996ರ ನವೆಂಬರ್‌ನಲ್ಲಿ ನಾಯಿ ಮಾಂಸ ಮಾರಾಟ ಮಾಡಿದ ವ್ಯಕ್ತಿ ಯೊಬ್ಬನನ್ನು ನ್ಯಾಯಾಲಯ ಬಂಧನದಿಂದ ಬಿಡುಗಡೆ ಮಾಡಿ ಮತ್ತೆ ಮಾರಾಟಕ್ಕೆ ಅವಕಾಶ ಕಲ್ಪಿಸಿತು. ಇದರಿಂದಾಗಿ ಸರ್ಕಾರದ ಆದೇಶಕ್ಕೆ ನ್ಯಾಯಾಲಯವು ಪರೋಕ್ಷವಾಗಿ ತಡೆ ನೀಡಿದಂತಾಯಿತು. ಈ ತೀರ್ಪನ್ನು ಉಪಯೋಗಿಸಿಕೊಂಡ ಚೊಯಾಂಗ್ ಅವರು ನಾಯಿ ಮಾಂಸದ ಭಕ್ಷ್ಯಗಳ ಹೋಟೆಲ್ ಆರಂಭಿಸಿದ್ದಾರೆ. ಆದರೆ ದಯಾ ಸಂಘದವರು ಇದಕ್ಕೆ ಪ್ರತಿಭಟನೆವ್ಯಕ್ತಪಡಿಸಿದ್ದಾರೆ.

## ಜೀನ್ಸ್ ಪ್ಯಾಂಟ್

ಈಗ ಯುವಕ ಯುವತಿಯರಿಗೆ ಹುಚ್ಚು ಹಿಡಿಸಿರುವ ಜೀನ್ಸ್‌ಪ್ಯಾಂಟ್ ಮೊದಲು ಬಳಕೆಗೆ ಬಂದದ್ದು 1850 ರಲ್ಲಿ ಅಂದಿನಿಂದ ಇವತ್ತಿನವರೆಗೆ ಅದರ ಬೇಡಿಕೆ ಹೆಚ್ಚು ತ್ತಲೇ ಹೋಗಿದೆ. ಅದನ್ನುಧರಿಸುವುದೇ ಪ್ರತಿಷ್ಟೆಯ ಸಂಕೇತ ವೆಂದು ಭಾವಿಸುವರೂ ಇದ್ದಾರೆ. ಇದಕ್ಕೆ ಕಾಲದ ಮಿತಿ ಇಲ್ಲ, ಅಳತೆಯ ಮಿತಿಯೂ ಇಲ್ಲ.

ಆರಂಭದಲ್ಲಿ ಜೀನ್ಸ್ ಒರಟಾಗಿ ಗಟ್ಟಿಮುಟ್ಟಾಗಿ ಇತ್ತು. ಅದನ್ನು ಕ್ಯಾನ್‌ವಾಸ್‌ನಿಂದ ತಯಾರಿಸಲಾಗಿತ್ತು. ಅದರ ನಿರ್ಮಾತೃ ಎರ್ವಿನಿಯ ಲೆವಿಸ್ಟ್ರಾಸ್ ಎಂಬ ಯಹೂದಿ. ಅಮೇರಿಕದ ಕಾರ್ಮಿಕನೊಬ್ಬನಿಗೆ ಬೇಗ ಹರಿದುಹೋಗದಂತ ಪ್ಯಾಂಟು ಬೇಕಾಗಿತ್ತು. ಏಕೆಂದರೆ ಮಣ್ಣು ಅಗೆಯುವ ಕೆಲಸ ಅವನದು. ಸ್ಟ್ರಾಸ್ ಈ ಗಣಿ ಕಾರ್ಮಿಕನಿಗೆ ಅಗತ್ಯಕ್ಕೆ ಸರಿ ಹೊಂದುವ ಪ್ಯಾಂಟನ್ನು ಹೊಲಿದ. ಸ್ಟ್ರಾಸ್‌ನ ಉದ್ಯೋಗ ಕ್ಯಾನ್‌ವಾಸ್ ಮಾರಾಟ. ಅದು ಅಮೇರಿಕದ ಸ್ಯಾನ್ ಫ್ರಾನ್ಸಿ ಸ್ಕೋದ ನಿವಾಸಿಗಳಿಗೆ ಗುಡಾರಗಳನ್ನು ನಿರ್ಮಿಸಲು ಬೇಕಾಗು ತ್ತಿತ್ತು. ಜೀನ್ಸ್ 1850ರಲ್ಲಿ ಕೇವಲ ಆರು ಡಾಲರುಗಳಿಗೆ ಮಾರಾಟವಾಗುತ್ತಿತ್ತು. ಆಗಿನಿಂದ ಸ್ಟ್ರಾಸ್‌ನ ಕ್ಯಾನ್‌ವಾಸ್ ಕಂಪನಿ ಲಕ್ಷಾಂತರ ಜೀನ್ಸ್‌ಗಳ ತಯಾರಿಸಿ ಮಾರುತ್ತಿದೆ. ಈಗ ಅದರ ಮಾರಾಟ ಬಿರುಗಾಳಿಯಂತೆ ಎಲ್ಲಾ ಕಡೆಗೂಹಬ್ಬಿದೆ. ಅದು ಸೋವಿಯತ್ ರಷ್ಯಾದಲ್ಲೂ ತನ್ನ ಅಧಿಪತ್ಯ ಸ್ಥಾಪಿಸಿದೆ.

# ದಿಟ್ಟ, ನೇರ ನುಡಿಯ – ಅಮೆ ಮನೆ ಕೃಷ್ಣಪ್ಪ ಶಿವರಾಯ್

## ಇವರೊಂದಿಗೆ ಕೆಲ ನಿಮಿಷಗಳು

ಕಂಡದ್ದನ್ನು ಕಂಡಂತೆ ಹೇಳುವ ದಿಟ್ಟ, ನೇರ ನುಡಿಯ ಅಮೆ ಕೃಷ್ಣಪ್ಪ ಶಿವರಾಯ್‌ರವರನ್ನು ಅವರ ಮನೆಯಲ್ಲಿ ಕೆಲನಿಮಿಷ ಮಾತನಾಡಿಸಿದಾಗ ಅವರ ಸಲಹೆ, ಮನದಾಳದ ಅನಿಸಿಕೆಗಳನ್ನು ಸಂಗಾತಿಯೊಂದಿಗೆ ಮಾತನಾಡಿದ್ದನ್ನು ನಿಮ್ಮ ಮುಂದಿಡುತ್ತಿದ್ದೇವೆ.

---

**'ಸಂಗಾತಿ ಪತ್ರಿಕೆ' ದೇಶದ ಮೂಲೆ ಮೂಲೆಯಲ್ಲಿರುವ ಗ್ರಾಮ ಹಂತ ದಿಂದ, ನಮ್ಮ ಜನಾಂಗದ ಉದ್ಯೋಗಸ್ಥರು, ಕೀರ್ತಿವಂತರು, ಪ್ರಶಸ್ತಿ ಪಡೆದಂತವರು, ಹೆಸರು ಗಳಿಸಿದವರು ಸಮಾಜಕ್ಕೆ ಯಾವುದೇ ಕಾರಣದಿಂದಲೂ ಸಹಾಯ ಮಾಡಿದವರ, ಕೀರ್ತಿ ತರಬಲ್ಲಂತವರ ಪರಿಚಯವನ್ನು ಮುಂದಿಡುವುದೇ ಆಗಿದೆ. ಇಲ್ಲಿ ಶಿವರಾಯ್ ಪರಿಚಯವನ್ನು ನಿಮ್ಮ ಮುಂದಿಡುತ್ತಿದ್ದೇವೆ**

**–ಸಂ.**

---

ಕರಿಕೆ ಎಂಬ ಕುಗ್ರಾಮದಲ್ಲಿ 1938 ರಲ್ಲಿ ಅಮೆ ಕೃಷ್ಣಪ್ಪ ಮತ್ತು ಸಣ್ಣಮ್ಮ ಎಂಬ ದಂಪತಿಗಳಿಗೆ 4 ಗಂಡು ಮತ್ತು 4 ಹೆಣ್ಣು ಮಕ್ಕಳಲ್ಲಿ 5ನೇ ಯವರಾಗಿ ಜನಿಸಿ ನಮ್ಮ ಜನಾಂಗದ ಕೀರ್ತಿಗೆ ಮೆರುಗನ್ನು ನೀಡಿದ್ದಾರೆ ಶ್ರೀಯುತರು.

ಸಂಗಾತಿ : ನಿಮ್ಮ ಊರಿಗೆ ಹಿರಿಮೆ ಪ್ರಖ್ಯಾತಿ ಮತ್ತು ನಿಮ್ಮ ವಿದ್ಯಾಭ್ಯಾಸವನ್ನು ತಿಳಿಸುತ್ತೀರಾ ?

ಉ : ಒಂದು ಕಡೆ ದಕ್ಷಿಣ ಕನ್ನಡ ಜಿಲ್ಲೆ, ಇನ್ನೊಂದೆಡೆ ಕೇರಳದ ಅಂತಿಮ ಘಟ್ಟ ಹೀಗೆ ಕೊಡಗಿನ ಒಂದು ಕೊನೆಯ ಭಾಗವಾದ ಕರಿಕೆ ಎಂಬ ಗ್ರಾಮಕ್ಕೆ ಬಸ್ಸಿನ ಸೌಕರ್ಯ ಸಹ ಬಹಳ ಕಡಿಮೆ. ಕಾಡು ಪೊದೆ, ಬೆಟ್ಟ,ಕಾಡು ಪ್ರಾಣಿಗಳ ಒಡನಾಡಿ ಸುಂದರಗ್ರಾಮವೆಂದೆ ಹೇಳಬೇಕಾದ ಕರಿಕೆ.



ಅಮೆ ಮನೆ ಕೃಷ್ಣಪ್ಪ ಶಿವರಾಯ್
ಬಿ.ಎ., ಎಲ್.ಎಲ್.ಬಿ.

ಆದರೆ ಇಂದು ಎಲ್ಲಾ ಸೌಲಭ್ಯವನ್ನು ಹೊಂದುತ್ತಿದೆ. ಇಷ್ಟು ನಮ್ಮ ಗ್ರಾಮದ ಪ್ರಖ್ಯಾತಿ.

ನಾನು ಚಿಕ್ಕಂದಿನಲ್ಲಿ ವಿದ್ಯಾಭ್ಯಾಸ ಮಾಡಬೇಕಾದರೆ ಸುಮಾರು 15 ಕಿ.ಮೀ. ಕಾಲ್ನಡಿಗೆಯಲ್ಲಿ ಶಾಲೆಯನ್ನು ತಲುಪಬೇಕಿತ್ತು. ಹೀಗಾಗಿ ಸಂಬಂಧಿಕರ ಮನೆಯಲ್ಲಿ ಉಳಿದುಕೊಂಡು ವಿದ್ಯಾಭ್ಯಾಸವನ್ನು ಮುಂದುವರಿಸಬೇಕಾಯ್ತು. ಜಿಟ್ಟಿಮಾನಿಯಲ್ಲಿ ಸರಕಾರಿ ಪ್ರೈಮರಿ, ಹೈಸ್ಕೂಲ್‌ನ್ನು ಸುಳ್ಯದ ಬೋರ್ಡ್ ಹೈಸ್ಕೂಲ್ (ಆಗ ಮದ್ರಾಸ್ ಸರಕಾರಕ್ಕೆ ಸೇರಿತ್ತು) ಪಿ.ಯು.ಸಿ. ಮೈಸೂರಿನ ಶಾರದ ವಿಲಾಸ್‌ನಲ್ಲಿ ಮತ್ತು ಪದವಿಯನ್ನು ವಿಶ್ವವಿಖ್ಯಾತಿ ಮಹಾರಾಜ ಪದವಿ ತರಗತಿಗಳಲ್ಲಿ ಕಳೆದೆ. ಲಾ ವಿದ್ಯಾಭ್ಯಾಸದೊಂದಿಗೆ ಕಲಿಕೆ ಜೊತೆಯಲ್ಲಿ ಗಳಿಕೆಯನ್ನು ಬೆಂಗಳೂರಿನಲ್ಲಿ ಮಾಡಬೇಕಾಯ್ತು.

ಸಂಗಾತಿ : ಸರಕಾರದ ಯಾವ ಹುದ್ದೆಗೆ ನಿಮ್ಮ ಮೊದಲ ಪಾದಾರ್ಪಣೆ ಆಯ್ತು ?

ಉ : ಪದವಿ ಪಡೆದ ಸಮಯದಲ್ಲಿ ಸ್ವ ಸಂಪಾದನೆಗೆ ಗಮನ ಹರಿಸಿದೆ. ಆಗ ನನಗೆ ಡಿಫೆನ್ಸ್ ಅಕೌಂಟ್ಸ್‌ನಲ್ಲಿ ಸ್ವಲ್ಪ ಸಮಯ ಉದ್ಯೋಗವಕಾಶ ದೊರಕಿತು. ಅನಂತರ ಸರಕಾರಿ ಲೆಕ್ಕ ಪರಿಶೋಧನ ಇಲಾಖೆಯಲ್ಲಿ ತಾತ್ಕಾಲಿಕ ಗುಮಾಸ್ತನಾಗಿ 1964 ರಲ್ಲಿ ಬೆಂಗಳೂರಿನಲ್ಲಿ ಕಾರ್ಯನಿರ್ವಹಿಸಿದೆ. ನಂತರ 1969 ಕೆ. ಪಿ. ಎಸ್. (ಕರ್ನಾಟಕ ಪಬ್ಲಿಕ್ ಸರ್ವಿಸ್) ನಲ್ಲಿ ಲೆಕ್ಕ ಅಧೀಕ್ಷಕನಾಗಿ, 1981 ಬೆಂಗಳೂರಿನಲ್ಲಿ ಲೆಕ್ಕಾಧಿಕಾರಿಯಾಗಿ ಮುಂಬಡ್ತಿ ದೊರೆಯಿತು ನಂತರ ಮಂಗಳೂರಿಗೆ ಬಂದೆ. ಹೀಗಿರುವಾಗ ಕೊಡಗಿನ ಕೆಲವು ಸರಕಾರಿ ಕಛೇರಿಗಳಲ್ಲಿ ಲೆಕ್ಕ ಪರಿಶೋಧನೆಗಾಗಿ ಸರಕಾರ ನನ್ನನ್ನು ನೇಮಿಸಿತು. ಅನಂತರ ಐದು ವರ್ಷ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಲೆಕ್ಕ ಅಧೀಕ್ಷಕನಾಗಿ, 4 ವರ್ಷ ಸಹಾಯಕ ದವ್ಯಾಧಿಕಾರಿಯಾಗಿ 1985 ರಲ್ಲಿ ಮೈಸೂರಿನ ಮೂಡ (Mysore Urban Development Authority) ಗೆ ಬರಬೇಕಾಯ್ತು. ಆಗ ಮುನಿಸ್ವಾಮಿ ಇದರ ಛೇರ್‌ಮೆನ್ ಆಗಿದ್ದರು. ಹೆಚ್ಚಿಗೆ ಹೇಳಬೇಕೆಂದರೆ ಮುನಿಸ್ವಾಮಿಯವರೇ ನನ್ನನ್ನು ಇಲ್ಲಿ ನಿಯೋಜಿಸಿದರು ಎಂದರೆ ತಪ್ಪಾಗಲಾರದು. (ಇಷ್ಟೆಲ್ಲಾ ಆಗಬೇಕಾದರೆ ಶಿವರಾಯರವರ ದಕ್ಷತೆ, ಶುದ್ಧ ಹಸ್ತವೇ

ಕಾರಣ ಮೂಡದಲ್ಲಿ(MUDA)ಇಂದು ಇವರನ್ನು ವಿಶಾಲವಾದ ಕೊಠಡಿಯಲ್ಲಿ ಮಾತನಾಡಿಸಬಹುದಾಗಿದೆ)

ಸಂಗಾತಿ : ನಿಮಗೆ ಈ ದೊಡ್ಡ ಹುದ್ದೆ ತೃಪ್ತಿ ತಂದಿದೆಯೆ ?

ಉ : ನಾನು ನನ್ನನ್ನು ಕೆಲಸದಲ್ಲಿ ತೊಡಗಿಸಿಕೊಂಡಿದ್ದೇನೆ. ಹೀಗಿರುವಾಗ ಈ ಹುದ್ದೆ ತೃಪ್ತಿ ತರಲೇಬೇಕಾಗಿದೆ. ಆದರೂ ನನಗೆ ಒಬ್ಬ ದಕ್ಷ ಪೊಲೀಸ್ ಅಥವಾ ಸೈನಿಕನಾಗಬೇಕೆಂಬ ಮಹದಾಸೆಯಿತ್ತು. ಸೇವೆಯಲ್ಲಿ ನಾನು ಎಂದೂ ಹಿಂದೆ ತಿರುಗಿ ನೋಡಲಿಲ್ಲ. ಶುದ್ಧ ಹಸ್ತ ಮತ್ತು ನೇರ ನುಡಿಗಳಿಂದ ಎಲ್ಲವನ್ನು ಸೌಹಾರ್ದವಾಗಿ ನಿಭಾಯಿಸಿಕೊಂಡು ಬಂದಿರುವುದೇ ನನ್ನ ಯಶಸ್ವಿಯ ಗುಟ್ಟೆನಿಸಿದೆ. 32 ವರ್ಷಗಳ ಸರಕಾರಿ ಸೇವೆಯಲ್ಲಿ ನಾನು ಎಲ್ಲಾ ತರಹದ ವ್ಯಕ್ತಿತ್ವದ ಮಾನವರನ್ನು ನೋಡಿದ್ದೇನೆ. ನನಗೆ ಈ ಸರಕಾರಿ ಹುದ್ದೆ ಸಂಪೂರ್ಣ ತೃಪ್ತಿ ತಂದಿದೆ.

ಸಂಗಾತಿ : ಸಂಘ ಸಂಸ್ಥೆಗಳಿಗೆ ನಿಮ್ಮ ಸೇವೆ ಏನು ?

ಉ : ಸುಮಾರು 1961–62 ರಲ್ಲಿ ಮೈಸೂರಿನಲ್ಲಿ ಗೌಡ ಸಮಾಜ ಸ್ಥಾಪನೆಯನ್ನು ಹುಟ್ಟು ಹಾಕಿದೆವು. ಆಗ ನಮಗೆ ಒಂದು ಕೇಂದ್ರ ಸ್ಥಾನ ಬೇಕಾಗಿತ್ತು. ಅದಕ್ಕಾಗಿ ಮೈಸೂರಿನ ದಾಸ್‌ಪ್ರಕಾಶ್ ಹೋಟೆಲ್‌ನಲ್ಲಿ ನಾವುಗಳು ಸಂಧಿಸುತ್ತಿದ್ದೇವು. ಅವರಲ್ಲಿ ಪ್ರಮುಖರೆಂದರೆ ಕುಂಞ್ಞಾಳಿ ಮಾದಪ್ಪನವರು. ಇವರ ಮಾರ್ಗದರ್ಶನದಲ್ಲಿ ಬೈಲೋಳಿರ ಕಾರ್ಯಪ್ಪರೊಂದಿಗೆ ವಿದ್ಯಾ ಸಂಘ ಸ್ಥಾಪನೆಯಾಯ್ತು. ಸಿರಗಜೆ ದೇವಯ್ಯನವರು ನಮ್ಮೊಂದಿಗಿದ್ದರು. ಬೆಂಗಳೂರು ಗೌಡ ಸಮಾಜದಲ್ಲಿ ನಾನು ಒಬ್ಬ ಸಕ್ರಿಯ ಸದಸ್ಯನಾಗಿ, ನಂತರ 1966ರಲ್ಲಿ ಕಾರ್ಯದರ್ಶಿಯಾಗಿ ದುಡಿದ ಅನುಭವವಿದೆ.

ಮೈಸೂರಿನ ಸಿದ್ಧಾರ್ಥ ನಗರದಲ್ಲಿರುವ "ಸಿದ್ಧಾರ್ಥ ಸ್ಪೋರ್ಟ್ಸ್ ಕ್ಲಬ್‌ನ ಗೌರವ ಕಾರ್ಯದರ್ಶಿಯಾಗಿ, ಅಲ್ಲದೆ ಇದೇ ಬಡಾವಣೆಯ ಗಣಪತಿ ದೇವಾಲಯದ ಸ್ಥಾಪನೆಗೆ ನನ್ನ ತನು, ಮನ, ಧನ ಸಹಾಯವನ್ನು ನೀಡಿದ್ದೇನೆ.

ಸಂಗಾತಿ : ಮೈಸೂರಿನ ಗೌಡ ವಿದ್ಯಾ ಸಂಘದ ವಿದ್ಯಾರ್ಥಿ ನಿಲಯದ ಅಪೂರ್ಣ ಕಟ್ಟಡದ ಜೊತೆಗೆ ಹೆಬ್ಬಾಳಿನ ನಿವೇಶನದ ಬಗ್ಗೆ ಸ್ವಲ್ಪ ವಿವರಣೆ ಕೊಡಬಲ್ಲಿರಾ ?

ಉ : ಕಂಚನ್ನು ಮೊಟೆದಾಗ ಬಂದ ಶಬ್ಧದಂತೆ ಉತ್ತರಿಸುತ್ತಾ ಪೂರ್ಣ ಸ್ವಾತಂತ್ರ್ಯ ಕೊಟ್ಟಾಗ, ತನ್ನದು ಎಂಬ ಮನವರಿಕೆಯಾದಾಗ ಒಬ್ಬ ವ್ಯಕ್ತಿ ಅದನ್ನು ಮುಂದುವರೆಸಲು ಸತತ ಪ್ರಯತ್ನ ಪಡಬಲ್ಲ. ಇದರೊಂದಿಗೆ ಎಲ್ಲರ ಸಹಕಾರವು ಮುಖ್ಯವಾಗುತ್ತದೆ. ಹೆಬ್ಬಾಳನಲ್ಲಿರುವ ನಿವೇಶನ ನಮ್ಮ ಸಂಘದ ಅಧೀನದಲ್ಲಿದೆ. ಅದನ್ನು ಒಂದು ಛತ್ರ ಅಥವಾ ಅತಿಥಿಗಳಿಗೆ ಉಳಿದುಕೊಳ್ಳಲು ಅತಿಥಿಗ್ರಹ ನಿರ್ಮಿಸಿ ಜೊತೆಗೆ ಅದು ಮೂಲೆ ನಿವೇಶನವಾದುದರಿಂದ ಅದನ್ನು ಮಳಿಗೆಗಳಾಗಿ ಪರಿವರ್ತಿಸಿ ಬಾಡಿಗೆದಾರರಿಗೆ ಕೊಟ್ಟಾಗ ಅದರಿಂದ ಸಂಘಕ್ಕೆ ಹೆಚ್ಚು ಲಾಭ ಬರಬಹುದು. ಈ ನಿವೇಶನ ಸುಮಾರು 60x100 ಅಡಿಗಳಲ್ಲಿದೆ. ಈ ವಿಸ್ತಾರವಾದ ನಿವೇಶನ ನಮಗೆ ದೊರೆತಿರುವುದು ಬಹಳ ಸಂತೋಷ.

ಸಂಗಾತಿ : ಈ ನಿವೇಶನ ಸಂಘಕ್ಕೆ ಮಂಜೂರಾಗಲು ನೀವು ಮುಖ್ಯ ಪಾತ್ರ ವಹಿಸಿದ್ದೀರಿ ಎಂದು ಗೊತ್ತಾಗಿದೆ, ಹೌದೆ?

ಉ : ಹೌದು, ನಾನು ಇವರ ಬಗ್ಗೆ ಮೂಡ (MUDA)ದ ಪ್ರತಿ ಹಂತದಲ್ಲಿ ಫೈಲ್‌ನ್ನು ಹಿಡಿದು ಪ್ರಯತ್ನಪಟ್ಟಿದ್ದೇನೆ. ಈ ನಿವೇಶನ ಇಂದು ನಮಗೆ ಅತಿ ಅಮೂಲ್ಯವಾದುದೇ ಸರಿ.

ಸಂಗಾತಿ : ಯುವಪೀಳಿಗೆಯ ಬಗ್ಗೆ ನಿಮ್ಮ ಅನಿಸಿಕೆಗಳೇನು ?

ಯುವಪೀಳಿಗೆ ಇಂದು ಎಲ್ಲಾ ಮಟ್ಟದಲ್ಲೂ ಹಿಂಜರಿಯುವ ಮನೋಭಾವ ಹೊಂದಿದೆ. ಇನ್ನೊಬ್ಬರ ಬೆನ್ನನ್ನು ನೋಡಿಕೊಂಡು ಮುಂದುವರಿಯುವುದನ್ನು ಬಿಟ್ಟು, ತಾನು ಸ್ವತಃ ಯೋಚನೆ ಮಾಡಿ ಅದು ತನಗೆ ಸೂಕ್ತವೆ ? ಎಂದು ಯೋಚಿಸಿ, ಅದು ಮುಂದಕ್ಕೆ ಸಹಕಾರಿ ಎಂಬುದನ್ನು ಅರಿತು, ಚಿಪ್ಪಿನಿಂದ ಹೊರಗೆ ಬಂದು ಸ್ವ ಇಚ್ಛೆಯಿಂದ ಮುಂದುವರೆದಲ್ಲಿ ಅದೊಂದು ಬಳುವಳಿಯಾದೀತು.

ಮನುಷ್ಯನಿಗೆ ಪಂಚೇಂದ್ರಿಯಗಳು ಹೇಗೆ ಮುಖ್ಯವೋ ಹಾಗೆಯೇ ಧ್ಯೇಯ, ಸಾಧನೆ, ಶೀಲ, ಸಂಯಮ ಹಾಗೂ ಸಮಯ ಪ್ರಜ್ಞೆ, ಪಂಚ ತತ್ವಗಳೇ ಮಾನವನ ಜೀವನದ ಊರುಗೋಲು ಎಂಬುದನ್ನು ಆಳವಾಗಿ ಅಧ್ಯಯನ ಮಾಡಿದಾಗ ಯುವ ಪೀಳಿಗೆಯಿಂದ ಭಾರತದ ಭವ್ಯ ಏಳಿಗೆಯಾಗುವುದರಲ್ಲಿ ಸಂಶಯವಿಲ್ಲ.

ಸಂಗಾತಿ : ನಿಮ್ಮ ಸುಖಮಯ ಸಂಸಾರದಲ್ಲಿ ಎಷ್ಟು ವಸಂತಗಳನ್ನು ಕಂಡಿದ್ದೀರಾ ?

ಉ : ನನ್ನ ಅರ್ಧಾಂಗಿ ಚೆರಿಯಮನೆ ಪೊನ್ನಪ್ಪನವರ ಪುತ್ರಿ ಚಂದ್ರ ಪ್ರಭಳೊಂದಿಗೆ ಸುಮಾರು 28 ವಸಂತಗಳನ್ನು ಕಂಡಿದ್ದೇನೆ. ಒಬ್ಬನೇ ಮಗ ಹೇಮಂತ್ ರಾಯ್, ಮತ್ತು ಮಗಳು ಅಶ್ವಿನಿರಾಯ್. ನಮ್ಮ ಸುಖ ಸಂಸಾರದ ಇಬ್ಬರು ಮಕ್ಕಳೊಂದಿಗಿದ್ದೇವೆ.

ನಾನು ನನ್ನ ಮಗಳನ್ನು ಒಬ್ಬ ದಕ್ಷ ಅಧಿಕಾರಿಣಿಯಾಗಿ ಮಾಡಬೇಕೆಂಬ

— 11ನೇ ಪುಟ ನೋಡಿ

# ಇತಿಹಾಸ : ಸುಬ್ರಹ್ಮಣ್ಯದ ಬಲ್ಲಾಳರಾಯ

ಸುಬ್ರಹ್ಮಣ್ಯ ದೇವಸ್ಥಾನಕ್ಕೆ ಹೋದಾಗೆಲ್ಲಾ ಹೊರ ಅಂಕಣ ಬಲಬದಿಯ ಪೌಳಿಯಲ್ಲಿ ನಿಲ್ಲಿಸಿದ ಕಲ್ಲಿನ ವಿಗ್ರಹದ ಬಗ್ಗೆ ಕುತೂಹಲ ಕೆರಳುತ್ತಿತ್ತು. ವಿಗ್ರಹದ ಪೀಠದಲ್ಲಿ ಬಲ್ಲಾಳ ರಾಯನ ವಿಗ್ರಹವೇಕೆ ? ಎಂಬ ಪ್ರಶ್ನೆ ಸದಾ ತಲೆಯಲ್ಲಿ ಮಂಥನ ನಡೆಸುತ್ತಿತ್ತು.

ಕೆಲವರಲ್ಲಿ ಕೇಳಿದಾಗ ನಮಗೇನು ಗೊತ್ತಿಲ್ಲವೆನ್ನುತ್ತಿದ್ದರು. ವಿಗ್ರಹದ ಸಮೀಪ ಹತ್ತಿ, ಸಾಸಿವೆ, ಬೆಣ್ಣೆ, ಕುಂಬಳ ಕಾಯಿ ಇಟ್ಟಿರುತ್ತಿತ್ತು. ಆದ್ದರಿಂದ ಬಲ್ಲಾಳ ರಾಯನಿಗೂ ದೇವರಿಗೂ ನಿಕಟ ಸಂಬಂಧವೇನೋ ಇರಲೇಬೇಕು. ಅದನ್ನು ಹೇಗಾದರು ತಿಳಿಯಲೇಬೇಕೆಂಬ ಛಲ ಬೆಳೆಯುತ್ತಿತ್ತು. ಒಮ್ಮೆ ಮಠಕ್ಕೆ ಹೋದಾಗ ಆಕಸ್ಮಿಕವಾಗಿ ಸ್ವಾಮೀಜಿಯವರ ದರ್ಶನ ಲಭಿಸಿದಾಗ ಧರ್ಮ–ಕರ್ಮಗಳ ಬಗ್ಗೆ ಸ್ವಾಮೀಜಿಯವರಿಂದ ಉಪನ್ಯಾಸವನ್ನು ಕೇಳಿದ ಮೇಲೆ ಬಲ್ಲಾಳರಾಯನ ವಿಗ್ರಹದ ನೆನಪಾಗಿ ಪ್ರಶ್ನಿಸಿದೆ. ಆ ಬಗ್ಗೆ ಸ್ವಾಮೀಜಿಯವರಿಂದ ಕೇಳಿದ ಕಥೆ ಇದು.

ಶ್ರೀ ವಿಷ್ಣು ತೀರ್ಥರು ಸಿದ್ಧ ಪರ್ವತವನ್ನು ಏರುವ ಸಮಯ, ಅಭೇದ್ಯ ಸಂಪುಟವನ್ನು ತೆಗೆದುಕೊಂಡು ಹೋಗಿದ್ದರು. ಅವರು ಕಲಿ ಪ್ರಾಬಲ್ಯದಿಂದ ಮಾಲಿನ್ಯವನ್ನು ಹೊಂದುವ ಮಧ್ವ ಮತವನ್ನು ಉದ್ಧರಿಸುವುದಕ್ಕಾಗಿ ಸಿದ್ಧಿಪರ್ವತದಿಂದ ಇಳಿದು ಬಂದು ಮಧ್ವ ಮತವನ್ನು ತಿರುಗಿ ಪ್ರಕಾಶಗೊಳಿಸುವರು ಎಂದು ಪ್ರಮಾಣಿಸಿದ್ದರು. ಅನಿರುದ್ಧ ತೀರ್ಥರು ಶಾಸ್ತ್ರೋಕ್ತ ಪ್ರಕಾರ ಮಠದಲ್ಲಿ ವ್ಯಾಸ, ವಿಠಲ, ಶ್ರೀ ನರಸಿಂಹದೇವರ ಪೂಜಾದಿಗಳನ್ನು ಮಾಡುತ್ತಿದ್ದರು. ಶ್ರೀ ವಿಷ್ಣು ತೀರ್ಥರು ಪರ್ವತಾರೋಹಣ ಸಮಯ ತೆಗೆದುಕೊಂಡು ಹೋಗಿದ್ದ ಶ್ರೀ ಸಂಪುಟವು ಶ್ರೀ ಸಂಸ್ಥಾನದಲ್ಲಿ ಸನ್ನಿಧಾನ ವಿಶೇಷಕ್ಕೂ ತಮಗೆ ಪರಮಾನುಗ್ರಹವಾಗುವುದಕ್ಕಾಗಿಯೂ, ಭಕ್ತ ಜನರ ಅಭೀಷ್ಟಪೂರ್ತಿಗೂ ಸಂಸ್ಥಾನದಲ್ಲಿರುವುದು ಅತ್ಯಾವಶ್ಯಕವೂ, ಉಗ್ರ ತಪಸ್ಸನ್ನು ಆಚರಿಸುತ್ತಿರುವವರಿಗೆ ನಮ್ಮ ಅವಶ್ಯಕತೆ ಇಲ್ಲ ಎಂದು ಮನದಲ್ಲಿ ಯೋಚಿಸುತ್ತಾ ಶ್ರೀ ಸಂಪುಟವನ್ನು ತನ್ನ ಪೂಜೆಗೆ ಕರುಣಿಸಬೇಕೆಂದು ಅಪೇಕ್ಷಿಸುತ್ತಿರುವುದನ್ನು ಶ್ರೀ ವಿಷ್ಣು ತೀರ್ಥರು ಜ್ಞಾನ ದೃಷ್ಟಿಯಿಂದ ತಿಳಿದವರಾಗಿ ಶ್ರೀ ಅನಿರುದ್ಧ ತೀರ್ಥರಿಗೆ ಕನಸ್ಸಿನಲ್ಲಿ ನಾಳೆ ದಿವಸ ಪ್ರಾತಃಕಾಲ ನೀವು ಅಪೇಕ್ಷಿಸಿದ ಶ್ರೀ ಅಭೇದ್ಯ ಸಂಪುಟವು ಪ್ರಾಪ್ತವಾಗುವುದು. ಅದನ್ನು ಸಂಸ್ಥಾನದಲ್ಲಿಟ್ಟು ಕ್ರಮ ಪ್ರಕಾರ ಪೂಜಿಸಬೇಕು ಹಾಗೆಯೇ ಮಠ ದೇವಸ್ಥಾನಗಳ ಎದುರುಗಡೆ ಹರಿಯುತ್ತಿರುವ ಸಣ್ಣನದಿ (ಬ್ರಹ್ಮನದಿ) ಯಲ್ಲಿ ಬರುವ ದರ್ಪಣ ಅಕ್ಷಯ ಪಾತ್ರೆಗಳನ್ನು ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಇಡಬೇಕೆಂದು ಆಜ್ಞಾಪಿಸಿದರು.

ಮರುದಿವಸ ಪ್ರಾತಃ ಕಾಲದಲ್ಲಿ ಸಂಪುಟಾಗಮನ ನಿರೀಕ್ಷಣೆಯಲ್ಲಿರಲು ಶ್ರೀ ಸಂಪುಟವು ಪ್ರಾಪ್ತವಾದುದರಿಂದ ಪರಮಾನಂದವಾಗಿ ಅದನ್ನು ನದಿಯ ದಂಡೆಯಲ್ಲಿರುವ ಒಂದು ಶಿಲೆಯಲ್ಲಿಟ್ಟು ಪೂಜಿಸಿ, ಶ್ರೀ ಮಠಕ್ಕೆ ಪರಮಾನಂದದಿಂದ ಕೊಂಡೊಯ್ದು ಸಂಚಾರಾದಿಗಳಿಗೆ ತೆಗೆದುಕೊಂಡುಹೋಗದೆ ಅಲ್ಲಿಯೇ ಸ್ಥಾಪಿಸಿ ಪೂಜಿಸುತ್ತಿದ್ದರು.

ಬ್ರಹ್ಮನದಿಯಲ್ಲಿ ಬಂದ ದರ್ಪಣ ಮತ್ತು ಅಕ್ಷಯಪಾತ್ರೆಯನ್ನು ಸುಬ್ರಹ್ಮಣ್ಯ ದೇವಸ್ಥಾನದಲ್ಲಿಟ್ಟ ಈ ಕಾರಣದಿಂದ ದರ್ಪಣ ದೊರೆತ ಸ್ಥಳವಿಶೇಷಕ್ಕೆ "ದರ್ಪಣ ತೀರ್ಥ"ವೆಂತಲೂ, ಸಂಪುಟ ಬಂದ ಕುಮಾರಧಾರ ನದಿಯ ಸ್ಥಳವಿಶೇಷಕ್ಕೆ "ಸಂಪುಟ ತೀರ್ಥ" ಎಂದು ಪ್ರಖ್ಯಾತಿಯಾಯಿತು.

ಆ ಕಾಲದಲ್ಲಿ ಈ ಪ್ರದೇಶಕ್ಕೆ ಅರಸನಾಗಿದ್ದ ಬಲ್ಲಾಳ ರಾಜನು ಈ ವರ್ತಮಾನ ಕೇಳಿ ಪೂರ್ವ ಶಾಪದಿಂದ ವಿವೇಕ ಶೂನ್ಯವಾಗಿ ಸಂಪುಟದಲ್ಲಿ ಏನೋ ಅಮೂಲ್ಯವಾದ ಸುವರ್ಣ ರತ್ನಾದಿ ವಸ್ತುಗಳಿರಬೇಕೆಂದು ಭ್ರಮಿಸಿ ಸದರಿ ಸಂಪುಟವನ್ನು ಅನಿರುದ್ಧ ತೀರ್ಥದಿಂದ ನಿರ್ಬಂಧಿಸಿ ಬಲಾತ್ಕಾರದಿಂದ ತೆಗೆದುಕೊಂಡು ಆನೆಗಳಿಂದ ತುಳಿಸಿ ಒಡೆದು ಭೇಧಿಸುವ ಪ್ರಯತ್ನ ಮಾಡಿದನು. ಆಗ ಆನೆಗಳ ದಂತವೇ ಮುರಿದು ಹೋಯಿತು. ಅನಂತರ ಅತಿ ಕ್ರುದ್ಧನಾಗಿ ಆನೆಗಳಿಂದ ತುಳಿಸಿದರೂ ಸಂಪುಟವು ಭಿನ್ನವಾಗದೆ ಆನೆಯೇ ಘೀಳಿಡುತ್ತಾ, ದರ್ಪಣ ತೀರ್ಥದಲ್ಲಿ ಅಸುನೀಗಿದವು. ಆನೆಗಳು ಸತ್ತ ಆ ಸ್ಥಳಕ್ಕೆ "ಆನೆಗುಂಡಿ" ಎಂದು ಹೆಸರಾಯಿತು.

ಅಷ್ಟರಲ್ಲಿ ಬಲ್ಲಾಳ ರಾಜನ ದೇಹದಲ್ಲಿ ಸಹಿಸಲು ಅಸಾಧ್ಯವಾದ ಉರಿಹತ್ತಿ, ಗುಳ್ಳೆಗಳೆದ್ದು ಬಹಳ ತಾಪತ್ರಾಸ ಉಂಟಾಗಲು ಕುಲದೈವ ಶ್ರೀ ಸುಬ್ರಹ್ಮಣ್ಯನಿಗೆ ಆತನು ಭಜನೆ ಇತ್ಯಾದಿ ಸೇವೆ ಮಾಡಿದ್ದರಿಂದ ದೇವರು ಆತನಿಗೆ ಮರುದಿನದ ರಾತ್ರಿ "ರಾಜನೇ, ನೀನು ಗುರುದೇವತಾ ದ್ರೋಹ ಮಾಡಿದುದರಿಂದ ಅದರ ಪರಿಹಾರಕ್ಕಾಗಿ ನಿನಗಿರುವ ಈ ದೇವಸ್ಥಾನದ ಸರ್ವಾಧಿಕಾರವನ್ನು "ಮಯೂರಾಂಕಿತ ಮುದ್ರಿಕೆ" ಯನ್ನು ಶ್ರೀ ಅನಿರುದ್ಧ ತೀರ್ಥರ ಸಂಸ್ಥಾನ ಪರಂಪರೆಗೆ ಒಪ್ಪಿಸಬೇಕು ಮತ್ತು ಮಠ–ದೇವಸ್ಥಾನಗಳ ನಡುವೆ ನಿನ್ನದೊಂದು ಶಿಲಾಮಯ ಪ್ರತಿ

ಮೆಯನ್ನು ಇಡಬೇಕು. ಹಾಗೆ ನನ್ನ ದರ್ಶನಕ್ಕಾಗಿ ಬರುವ ಭಕ್ತರು ಆ ಪ್ರತಿಮೆಗೆ ಹತ್ತಿ, ಸಾಸಿವೆ, ಬೆಣ್ಣೆ, ಕುಂಬಳಕಾಯಿ ಇವುಗಳನ್ನು ಸಮರ್ಪಿಸಬೇಕು. ಆದ್ದರಿಂದ ನಿನ್ನ ದೇಹದಲ್ಲಿ ಶಾಂತಿ ಉಪಶಮನ ಉಂಟಾಗುವುದೆಂದು ಅಪ್ಪಣೆಯಾಯಿತು.

ಆದರಂತೆ ಬಲ್ಲಾಳ ರಾಜನು ತನಗಿದ್ದ ಸುಬ್ರಹ್ಮಣ್ಯ ದೇವಸ್ಥಾನದ ಸರ್ವಾಧಿಕಾರವನ್ನು ಸುಬ್ರಹ್ಮಣ್ಯಮಠದ ಅಧಿಪತಿ ಶ್ರೀ ಅನಿರುದ್ಧ ತೀರ್ಥರಿಗೆ ತಾಮ್ರ ಶಾಸನಪೂರ್ವಕವಾಗಿ ಸಮರ್ಪಿಸಿ, ಶ್ರೀ ಸಂಪುಟ ನರಸಿಂಹದೇವರ ಮತ್ತು ಅನಿರುದ್ಧ ತೀರ್ಥರ ಪರಮಾನುಗ್ರಹಕ್ಕೆ ಪಾತ್ರನಾಗಿ ತಾನು ಶಿಲಾರೂಪನಾದನು. ಈಗಲೂ ಬಲ್ಲಾಳ ರಾಜನ ಶಿಲಾಪ್ರತಿಮೆಯು ಸುಬ್ರಹ್ಮಣ್ಯ ದೇವರ ಎದುರುಗಡೆ ಇದೆ. ಅದಕ್ಕೆ ಉರಿ ಪರಿಹಾರಕ್ಕಾಗಿ ಭಕ್ತರು, ಮೇಲ್ಕಾಣಿಸಿದ ಪದಾರ್ಥಗಳನ್ನು ಕಾಣಿಕೆಯಾಗಿ ಇಡುತ್ತಾರೆ. ಇದಕ್ಕೆ ತಾಮ್ರ ಶಾಸನದಲ್ಲೂ-ಪುಸ್ತಕದಲ್ಲೂ ಸ್ಪಷ್ಟವಾದ ದಾಖಲಿದೆ. ಇದರಿಂದ ಆತನು ಹೊಂದಿದ ಶಾಪಕ್ಕೆ, ಗುರು ಪೀಠಕ್ಕೆ ಎಸಗಿದ ದ್ರೋಹವೇ ಕಾರಣ. ಅದಕ್ಕಾಗಿ ತನ್ನ ಸಮಸ್ತವನ್ನು ದೇವರಿಗೆ ಅರ್ಪಿಸಿದ. ದೇವಸ್ಥಾನದ ಒಳ ಅಂಕಣದಲ್ಲಿರುವ ನಾಲ್ಕು ಭಾರೀ ಕಲ್ಲು ಕಂಬಗಳು ಮೊದಲು ಬಲ್ಲಾಳ ರಾಯನ ಅರಮನೆಯಲ್ಲಿ ಇದ್ದುದನ್ನು ಆನೆಗಳಿಂದ ಎಳೆಸಿ ತಂದು ದೇವಸ್ಥಾನದಲ್ಲಿ ನಿಲ್ಲಿಸಲಾಯಿತು. ಬಲ್ಲಾಳರಾಯನು ದಯಾಳು ಹಾಗೂ ದೈವ ಭಕ್ತನು ಆಗಿದ್ದು, ಹಿಂದೆ ಋಷಿಗಳ ಶಾಪವಿದ್ದುದ್ದರಿಂದಲೇ ಹಾಗೆ ನಡೆದುಕೊಳ್ಳುವಂತಾಯಿತು.

ಹಿಂದೆ ಲವಣ ಸಮುದ್ರದ ದಡದಲ್ಲೊಬ್ಬ ವಾಣಿಜ್ಯನೆಂಬ ವೈಶ್ಯನು ವ್ಯಾಪಾರದಿಂದ ಹಣಗಳಿಸಿ ರಾಮೇಶವೆಂದು ಪ್ರಸಿದ್ಧ ಪುರದಲ್ಲಿ ಅಂಗಡಿಯಿಟ್ಟು ತಾನು ತಂದಿರುವ ರತ್ನಾದಿ ವಸ್ತುಗಳನ್ನು ಮಾರಿ ಹಣವನ್ನು ಹಿಡಿದುಕೊಂಡು ತನ್ನೂರಿಗೆ ಹೋಗಲು ಹೊರಟಾಗ ಕುಮಾರಾದ್ರಿಯಿಂದ ಯತಿಗಳು ಬರಲು, ವೈಶ್ಯನು ಅವರನ್ನು ನೋಡಿಯೂ ನೋಡದಂತೆ ನಿಂತು ಅವಮಾನಪಡಿಸಿದನು.

ಈ ಕಾರಣಕ್ಕೆ ಕ್ರುದ್ಧರಾದ ಯತಿಗಳು ಶಿಲೆಯಾಗು ಎಂದು ಶಪಿಸಿ, ಆಶ್ರಮಕ್ಕೆ ಹೊರಡಲು ವೈಶ್ಯನು ಪಶ್ಚಾತ್ತಾಪಗೊಂಡು, ಕ್ಷಮಿಸಿರೆಂದು ಕೈಜೋಡಿಸಿ ಜಯ ಜಯವೆನ್ನುತ್ತಾ ಯತಿವರ್ಯರೇ ಅರಿಯದೆ ನಾನು ಮಾಡಿದ ತಪ್ಪಿಗಾಗಿ ತಾವಿತ್ತ ಶಾಪ ಪರಿಹಾರ ಯಾವಾಗ ಆಗುವುದೆಂದು ಪ್ರಾರ್ಥಿಸಿ ಹರಿಭಕ್ತರಾದ ಆ ಯತಿಗಳಿಗೆ ದಂಡ ಪ್ರಣಾಮ ಮಾಡಿದನು ಈ ಪರಿಯಾಗಿ ಬಹು ವಿಧದಿಂದ ಪ್ರಾರ್ಥಿಸಿದ ಆ ವೈಶ್ಯನನ್ನು ನೋಡಿ ಯತಿಗಳು ಕರುಣೆಯಿಂದ ಹೇಳಿದರು-ನೀನು ಕುಮಾರಾದ್ರಿಗೆ ಹೋಗು. ಅಲ್ಲಿ ಪಾರ್ವತಿ ಪುತ್ರನಾದ ಸ್ಕಂದನು ಶಾಪದ ಪರಿಹಾರ ಕಾಲವನ್ನು ಹೇಳುವನು .ನೀನು ಅಲ್ಲಿಗೆ ಹೋಗಿ ಸ್ನಾನಧಾನಾದಿಗಳನ್ನು ಮಾಡು. ಧರ್ಮಮೂರ್ತಿಯಾದ ಸುಬ್ರಹ್ಮಣ್ಯನು ನಿನ್ನಿಂದ ಸೇವಿಸಲ್ಪಟ್ಟವನಾಗಿ ನಿನ್ನ ಇಷ್ಟಾರ್ಥಗಳನ್ನು ನೆರವೇರಿಸುವನು ಎಂದರು. ವೈಶ್ಯ ಈ ಮಾತನ್ನು ಕೇಳಿ ಆ ಯತಿಗಳೊಡಗೂಡಿ ಸುಬ್ರಹ್ಮಣ್ಯಕ್ಕೆ ಹೋಗಿ ಸ್ನಾನ ಮಾಡಿ ದೇವರ ಸನ್ನಿಧಿಯಲ್ಲಿ ಸಮಸ್ತ ಧಾನಗಳನ್ನು ಬ್ರಾಹ್ಮಣರಿಗೆ ನೀಡಿ, ಭಕ್ತಿಯಿಂದ ಪ್ರಾರ್ಥಿಸಲು, ದಯಾಳುವಾದ ಸುಬ್ರಹ್ಮಣ್ಯನು ಪ್ರಸನ್ನನಾಗಿ "ಭಕ್ತನೇ ವರವನ್ನು ಬೇಡು, ನೀಡುವನೆಂದನು. ಆಗ ವೈಶ್ಯನು ತನ್ನ ವೃತ್ತಾಂತವನ್ನು ಅರುಹಿ ಯತಿ ಶಾಪವನ್ನು ಪರಿಹರಿಸಿ, ಅನುಗ್ರಹಿಸು ಎಂದು ಪ್ರಾರ್ಥಿಸಲು ಮಹರ್ಷಿಗಳ ಶಾಪವು ಅನುಭವಿಸಿಯೇ ತೀರತಕ್ಕದ್ದು. ಅನುಭವಿಸುವ ಕಾಲವನ್ನು ತಿಳಿಸುವೆನು ಕೇಳು, ನೀನು ಕಲಿಯುಗದಲ್ಲಿ ನನ್ನ ಪಾದದಲ್ಲಿ ಭಕ್ತಿಯುಳ್ಳ ಬುದ್ಧಿವಂತ ರಾಜನಾಗಿ ಈ ಕ್ಷೇತ್ರದಲ್ಲಿ ಇರುವಿ. ಆಗ ಯತಿಗಳು ಮರಳಿ ಯತಿಗಳಾಗಿ ಇಲ್ಲಿಗೆ ಬರುವರು. ಭಗವಂತನಾದ ಹರಿಗೆ ಮಾಡಿದ ದ್ರೋಹದಿಂದಲೂ, ಗುರು ಶಾಪದಿಂದಲೂ ಶಿಲಾರೂಪವನ್ನು ತಾಳಿ ನನ್ನ ಬಳಿಯಲ್ಲಿರುವೆಯಾ ನನ್ನ ಭಕ್ತರು ನಿನಗೆ ಧಾನ್ಯಾದಿಗಳನ್ನು ಸಮರ್ಪಿಸುವರು ಎಂದು ಅನುಗ್ರಹಿಸಿ ಅದೃಶ್ಯನಾದನು. ಈ ಕಥಾ ಸಂದರ್ಭದಿಂದ ಪೂರ್ವದ ವೈಶ್ಯನೇ ಬುದ್ಧರಾಜನೆಂದು, ಬುದ್ಧ ಮತಾವಲಂಭಿಯಾದ, ಬಲ್ಲಾಳ ರಾಜನಾಗಿ ಕಲಿಯುಗದಲ್ಲಿ ಹುಟ್ಟಿದನು. ಆಗ ಯುಗಾಂತರದಲ್ಲಿ ಯತಿಗಳಾಗಿ ಶಪಿಸಿದ ಹರಿಭಕ್ತರೇ ಕಲಿಯುಗದಲ್ಲಿ ಜಗದ್ಗುರು ಮಧ್ವಾಚಾರ್ಯರ ಸನ್ಮತೋದ್ಧಾರಕರಾಗಿಯೂ, ಶ್ರೀ ವಿಷ್ಣು ತೀರ್ಥಚಾರ್ಯರ ಕರಕಮಲ ಸಂಜಾತರಾಗಿ ಶ್ರೀ ಅನಿರುದ್ಧ ತೀರ್ಥರೆಂಬ ನಾಮದಿಂದ ಜನಿಸಿ ಬಂದರೆಂದು ತಿಳಿಯಲಾಗಿದೆ.

ಅಭೇದ್ಯ ಸಂಪುಟವದ್ನು ಭೇದಿಸಲು ಮಾಡಿದ ದ್ರೋಹದಿಂದ ಆ ಗುರು ಶಾಪದಿಂದ ಶಿಲೆಯಾಗಿ ಇಲ್ಲಿರುವುದು ಇದೇ ವಿಗ್ರಹದ ಬಲ್ಲಾಳರಾಯನ ಪೂರ್ವ ಜನ್ಮದ ಕತೆ ಎಂದು ಹೇಳಿದವರು ಸುಬ್ರಹ್ಮಣ್ಯ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಭೂಷಣ ಸ್ವಾಮೀಜಿಯವರು.

● ಲಲಿತಾಜ ಮಲ್ಲಾರ
ಕೃಪೆ : ಗೌಡಧ್ವನಿ

---

# ವಿಶಿಷ್ಟ ವ್ಯಕ್ತಿತ್ವದ ಡಾ|| ದೇ.ಜ.ಗೌ.

ಮಾಜಿ ಕುಲಪತಿ ಪ್ರೊ|| ದೇ. ಜವರೇಗೌಡರ ಹೋರಾಟದ ಬದುಕು ಮತ್ತು ಬರಹ ಅವಿಸ್ಮರಣೀಯ. ಇವರು ಸಲ್ಲಿಸಿರುವ ಗಣನೀಯ ಸೇವೆಯನ್ನು ಪುರಸ್ಕರಿಸಿ ಈ ಭಾರಿಯ ಘಟಿಕೋತ್ಸವದಲ್ಲಿ ಮೈಸೂರು ವಿಶ್ವವಿದ್ಯಾನಿಲಯವು 'ಗೌರವ ಡಾಕ್ಟರೇಟ್' ಪದವಿ ನೀಡಿ ಗೌರವಿಸಿದೆ.

ನೇರನುಡಿ, ಸರಳ ವ್ಯಕ್ತಿತ್ವ, ಒಮ್ಮೊಮ್ಮೆ ಯಾರನ್ನಾದರೂ ಮಾತಿನಲ್ಲಿ ದೂಷಿಸಿದರೆ ಅದು ಕೇವಲ ತಾತ್ಕಾಲಿಕ. ಇವರು ಯಾವತ್ತೂ ವಿದ್ವತ್ತಿಗೆ ಬೆಲೆ ಕೊಡುವಂತವರು. ಅಂತಹವರನ್ನು ಪ್ರೋತ್ಸಾಹಿಸುತ್ತಾರೆ. ಇವರ ಮಾತು ಕೆಲವು ಸಾರಿ ಕಠಿಣ ಎನಿಸಬಹುದು, ಆದರೆ ಅದರಲ್ಲಿ ಪರಿಶುದ್ಧತೆ, ಸತ್ಯವಿರುತ್ತದೆ. ಇದರಿಂದಾಗಿ ವಿಶಿಷ್ಟ ವ್ಯಕ್ತಿತ್ವಕ್ಕೆ ದೇಜಗೌ ಹೆಸರಾದವರು.

ಆಡು ಮೆಯಿಸುವುದನ್ನು ಬಿಟ್ಟು ಶಾಲೆಗೆ ಸೇರಿದ ಹುಡುಗ ತನ್ನ ತಂದೆಯಿಂದ ಪೆಟ್ಟು ತಿಂದ. ಓದಿನ ಶ್ರದ್ಧೆ ಕಂಡ ಅಭಿಮಾನಿಗಳೊಬ್ಬರ ಪ್ರೋತ್ಸಾಹದಿಂದ ಶಾಲೆ ಸೇರಿದ. ಅಧ್ಯಾಪಕನಾದ. ಮುಂದೆ ಪ್ರಾಧ್ಯಾಪಕ ಪದವಿಗೇರಿ ಕುಲಪತಿಯೂ ಆದ.

ಈ ವ್ಯಕ್ತಿಯೇ ಪ್ರೊ|| ದೇವೇಗೌಡ ಜವರೇಗೌಡ. ಚನ್ನಪಟ್ಟಣ ತಾಲ್ಲೂಕಿನ ಚಕ್ಕರೆ ಇವರ ಊರು. ಇದೇ ತಾಲ್ಲೂಕಿನ ಮುದಿಗೆರೆಯ ಅಣ್ಣನ ಮನೆಯಲ್ಲಿ ಜುಲೈ 9, 1919ರಲ್ಲಿ ಜನಿಸಿದರು.

ಪ್ರಾಥಮಿಕ ಓದು ಚಕ್ಕರೆಯಲ್ಲಿ, ಹೈಸ್ಕೂಲು ಚನ್ನಪಟ್ಟಣದಲ್ಲಿ. ಬೆಂಗಳೂರಿನಲ್ಲಿ ಇಂಟರ್ ಮುಗಿಸಿ ಇಂಗ್ಲೀಷ್ ಆನರ್ಸಿಗಾಗಿ ಮೈಸೂರಿಗೆ ಬಂದರು. ಪ್ರೊ|| ವೆಂಕಣ್ಣಯ್ಯ, ಡಾ|| ಕುವೆಂಪು ಅವರ ಹೆಸರು ಕೇಳಿ ಆಕರ್ಷಿತರಾದರು. ಕನ್ನಡ ಆನರ್ಸ್ ಸೇರಿದರು. ಇಲ್ಲಿನ ರಾಮಕೃಷ್ಣ ಆಶ್ರಮದಲ್ಲಿ ನೆಲೆಸಿದರು.

ಕನ್ನಡ ಆನರ್ಸ್ ಮುಗಿಸಿದ ನಂತರ ಕೊಲ್ಲಾಪುರಕ್ಕೆ ತೆರಳಿದರು. ಅಲ್ಲಿ ನ್ಯಾಯಶಾಸ್ತ್ರ ಕಲಿಕೆಯ ಆಸೆ ಕೈಗೂಡದೆ ಬೆಂಗಳೂರಿಗೆ ಬಂದರು. ವಿದ್ಯಾ ಇಲಾಖೆಯ ಪರೀಕ್ಷೆ ಶಾಖೆಯ ಗುಮಾಸ್ತರಾದರು. ಸ್ವಲ್ಪ ಕಾಲದ ನಂತರ ಮೈಸೂರಿನಲ್ಲಿ ಎಂ.ಎ. ವ್ಯಾಸಂಗ ಮಾಡಿ 1943 ರಲ್ಲಿ ಪದವಿಗಳಿಸಿದರು. ಸರ್ಕಾರಿ ಕಾರ್ಯಸೌದ ಸೇರಿ ಅಕೌಂಟ್ಸ್ ಪರೀಕ್ಷೆ ಮುಗಿಸಿದರು. 1945 ರಲ್ಲಿ ಸೆಂಟ್ರಲ್ ಕಾಲೇಜಿನ ಅಧ್ಯಾಪಕ ವೃತ್ತಿ, ಜೊತೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಶಬ್ದ ಸಂಗ್ರಹದಲ್ಲಿ ಕೂಡಿಕೊಂಡರು.

1945ರಲ್ಲಿ ಮೈಸೂರಿನ ಮಹಾರಾಜ ಕಾಲೇಜಿಗೆ ವರ್ಗ. ಇಲ್ಲಿ ಸಂಶೋಧನ ಶಾಖೆಯ ಸಂಪರ್ಕ ಹಾಗೂ 'ಪ್ರಬುದ್ಧ ಕರ್ನಾಟಕ'ದ ಸಂಪಾದಕತ್ವ. 1952ರಲ್ಲಿ ಉಪಪ್ರಾಧ್ಯಪಕ. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಣ ಶಾಖೆಯ ಕಾರ್ಯದರ್ಶಿ ನಂತರ ಪರೀಕ್ಷಣಾಧಿಕಾರಿ. ಮುಂದೆ ಶಿವಮೊಗ್ಗ ಸಹ್ಯಾದ್ರಿ ಕಾಲೇಜಿನ ಪ್ರಿನ್ಸಿಪಾಲರಾಗಿ, ಅನಂತರ ಮೈಸೂರಿಗೆ ಹಿಂತಿರುಗಿದರು.

ಮಾನಸ ಗಂಗೋತ್ರಿಯ ಕನ್ನಡ ಇಲಾಖೆ ರೀಡರ್ ಆಗಿದ್ದಾಗ ಪ್ರಾಧ್ಯಾಪಕ ಪ್ರೊ|| ತಿ. ನಂ. ಶ್ರೀ ಅವರೊಡಗೂಡಿ ಆ ವಿಭಾಗಕ್ಕೆ ಶ್ರಮಿಸಿದರು. ಮಹಾರಾಜ ಕಾಲೇಜನಿಂದ ಗಂಗೋತ್ರಿಗೆ ಕೆಲವು ಇಲಾಖೆಗಳು ಬಂದು ಸೇರಲು ದೇಜಗೌ ಅವರ ಹೋರಾಟ ಸ್ಮರಿಸುವಂತಹದು. ಕನ್ನಡ ಇಲಾಖೆ ಇಲ್ಲಿಗೆ ಮೊದಲು ಬಂದ ಮೇಲೆ ಇತರ ಇಲಾಖೆಗಳೂ ಬರಲು ಪ್ರೇರಕ ಶಕ್ತಿ ಇವರಾದರು.

ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಕನ್ನಡ ಸಂಪಾದನಾ ವಿಭಾಗವನ್ನು ಬೇರ್ಪಡಿಸಿ, ಅದನ್ನು ಕನ್ನಡ ಅಧ್ಯಯನ ಸಂಸ್ಥೆಯ ತೆಕ್ಕೆಗೆ ತಂದು ಹೆಚ್ಚು ಹೆಚ್ಚು ಪ್ರಾಚೀನ ಗ್ರಂಥಗಳು ಸಂಗ್ರಹವಾಗಿ ಸಂಪಾದಿತವಾಗಿ ಮುದ್ರಣ ಕಾಣುವಂತಾಯಿತು. ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ಭಾಷಾಂತರ ಗ್ರಂಥ ಪ್ರಕಟಣೆ, ಜಾನಪದ ವಸ್ತು ಸಂಗ್ರಾಲಯ ಆರಂಭಿಸಿದರು. ವಿಶ್ವಕೋಶದ ಸಂಪುಟಗಳ ರಚನೆಯ ಜವಾಬ್ದಾರಿಯೂ ಅವರದಾಯಿತು. 1969 ರಲ್ಲಿ ಕುಲಪತಿ ಸ್ಥಾನವನ್ನು ಅಲಂಕರಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಅಭಿವೃದ್ಧಿಗೆ ಅವಿಶ್ರಾಂತವಾಗಿ ದುಡಿದರು.

1970 ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ವೇಳೆ, ಸಮ್ಮೇಳನದ ಅಧ್ಯಕ್ಷಗಿರಿ ದೇಜಗೌ ಅವರಿಗೆ ದೊರಕಿತು.

ಕನ್ನಡದ ಗದ್ಯ ಲೇಖಕರಲ್ಲಿ 'ದೇಜಗೌ' ಅಗ್ರಗಣ್ಯರು. ಕನ್ನಡ ಮತ್ತು ಇಂಗ್ಲೀಷ್ ಎರಡರಲ್ಲೂ ಭಾಷಾಪ್ರಭುತ್ವವುಳ್ಳವರು. ಇವರು ಕೆಲವಾರು ಜೀವನ ಚರಿತ್ರೆಗಳನ್ನು ವಿಮರ್ಶಾ ಗ್ರಂಥಗಳನ್ನು ರಚಿಸಿದ್ದಾರೆ. ಅಲ್ಬರ್ಟ್ ಐನ್‌ಸ್ಟೀನ್, ತೀ.ಸಂ.ಶ್ರೀ.,

ಕುವೆಂಪು, ಬೆಂಗಳೂರು ಕೆಂಪೇಗೌಡ, ಕಡುಗಲಿ ಕುಮಾರರಾಮ, ಮೋತಿಲಾಲ್ ನೆಹರು, ಶ್ರೀ ರಾಮಾಯಣ ದರ್ಶನಂ, ವಚನ ಚಂದ್ರಿಕೆ, ಷಡಕ್ಷರದೇವ, ಸಾಹಿತಿಗಳ ಸಂಗದಲ್ಲಿ, ಬೆರಕೆಸೊಪ್ಪು ಈ ಮೊದಲಾದ ಗ್ರಂಥಗಳು ಇವರಿಂದ ಹೊರಬಂದವು.

ಕೃಷ್ಣಮೃಹತೀಸಿಂಗರ 'ನೆನಪು ಕಹಿಯಲ್ಲ' ಟಾಲ್‌ಸ್ಟಾಯ್‌ರ 'ಪುನರುತ್ಥಾನ' (ಸೋವಿಯತ್ ದೇಶದ ಪ್ರಶಸ್ತಿಗಳಿಸಿದ ಕೃತಿ) ಜೇನ್ ಆಸ್ಟಿನ್‌ರ ಕೃತಿ 'ಹವ್ಯುಮ್ಮ ಬಿಯ್ಯುಮ್ಮ' ಇವರಿಗೆ ಕೀರ್ತಿ ತಂದ ಭಾಷಾಂತರ ಕೃತಿಗಳು.

ಕಬ್ಬಿಗರ ಕಾವ್ಯ, ಜೈಮಿನಿ ಭಾರತ ಸಂಗ್ರಹ, ಶ್ರೀ ರಾಮಾಯಣ ದರ್ಶನಂ, ಹೊಸಗನ್ನಡ ಕಥಾ ಸಂಗ್ರಹ, ದೇಜಗೌ ಅವರ ಸಂಪಾದಿತ ಗ್ರಂಥಗಳು. ತಮ್ಮ ಆತ್ಮಕಥೆ 'ಹೋರಾಟದ ಬದುಕು' ಮತ್ತೊಂದು ಅವರ ಮೇರು ಕೃತಿ. ಎಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ಅವರು ರಚಿಸಿದ್ದಾರೆ.

ರಷ್ಯಾ, ಯೂರೋಪ್ ಮತ್ತು ಆಫ್ರಿಕಾ ದೇಶಗಳ ಪ್ರವಾಸ ಸಾಹಿತ್ಯ ಕೃತಿಗಳಲ್ಲಿ ಶೈಕ್ಷಣಿಕ ಆಸಕ್ತಿ, ಉನ್ನತ ಶಿಕ್ಷಣದ ಬಗೆಗಿನ ಅವರ ಕಾಳಜಿಯನ್ನು ಕಾಣಬಹುದು.

ಬಹುಮುಖ ಪ್ರತಿಭೆಯ 'ದೇಜಗೌ' ಅವರನ್ನು ಕರ್ನಾಟಕ ವಿಶ್ವವಿದ್ಯಾನಿಲಯ 1978ರಲ್ಲಿ ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ. ನಿವೃತ್ತರಾದಮೇಲೆ 'ಕುವೆಂಪು ವಿದ್ಯಾವರ್ಧಕ ಟ್ರಸ್ಟ್‌ನ ಪ್ರಗತಿಗಾಗಿ ತಮ್ಮ ವಾಸದ ಮನೆಯನ್ನೆ ಧಾನ ಮಾಡಿದರು. ಈಗ ಅದರ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ.

ನಿವೃತ್ತಿಯ ಇಂದಿನ ವೇಳೆಯಲ್ಲೂ ಬರಹದ ದುಡಿಮೆಯನ್ನು ಮುಂದುವರಿಸಿದ್ದಾರೆ. ಅದೊಂದೇ ಬಾಳಿನಲ್ಲಿ ಸ್ಥಿರವಾದುದು ಎಂಬುದನ್ನು ಅವರು ತಿಳಿದಿದ್ದಾರೆ. ಡಾ॥ ದೇಜಗೌ ಅವರ ಬದುಕು ಬರಹಗಳು ನನ್ನಂತಹ ಅನೇಕರಿಗೆ ಸ್ಫೂರ್ತಿ ನೀಡಿದೆ, ಮಾರ್ಗದರ್ಶನ ಮಾಡಿದೆ.

● ಪಿ.ಆರ್. ತಿಪ್ಪೇಸ್ವಾಮಿ
ಮಾಜಿ ಅಧ್ಯಕ್ಷರು,
ಲಲಿತ ಕಲಾ ಅಕಾಡೆಮಿ, ಮೈಸೂರು.

## ನಿಧನ

ಶ್ರೀ ಸಿ.ಎಂ. ಆನಂದ, ಮಾಜಿ ಸೈನಿಕ. ಇವರು ಪತ್ನಿ, ಒಂದು ಗಂಡು, ಒಂದು ಹೆಣ್ಣು ಮಕ್ಕಳನ್ನು ಮೇ 2 ರಂದು ಮಂಡ್ಯದಲ್ಲಿ ಅಗಲಿದ್ದಾರೆ. ಇವರು ಮಂಡ್ಯ ಸೈನಿಕ ನಗರದ ಸ್ಥಾಪನೆಗೆ ಶ್ರಮಿಸಿದ್ದರು.

## ಹರಿಸೇವೆ

ದಿನಾಂಕ 3-5-97 ಮತ್ತು 4-5-97 ರಂದು ಭಾಗಮಂಡಲನಾಡು, ಸಣ್ಣಪುಲಿಕೋಟ್ ಗ್ರಾಮದ ಕುಯ್ಯುಮುಡಿ ಕುಟುಂಬದಲ್ಲಿ ಶ್ರೀ ವೆಂಕಟರಮಣ ದೇವರ ಹರಿಸೇವೆ ಮತ್ತು ಧರ್ಮ ದೈವದ ಕೋಲವನ್ನು ವಿಜೃಂಭಣೆಯಿಂದ ಆಚರಿಸಲಾಯಿತು ಎಂದು 'ಸಂಗಾತಿ'ಗೆ ತಿಳಿದು ಬಂದಿದೆ.

# ಮಹಿಳೆ ಮತ್ತು ರಾಜಕೀಯ

ರಾಜಕೀಯದಲ್ಲಿ ಮಹಿಳೆಯರು ಪಾಲ್ಗೊಳ್ಳುವುದು ಅತ್ಯಂತ್ಯ ಮಹತ್ವದ ವಿಷಯವಾಗಿದೆ. ವಿಶ್ವದ ಜನಸಂಖ್ಯೆಯಲ್ಲಿ ಅರ್ಧಭಾಗದಷ್ಟು ಮಹಿಳೆಯರೇ ಇದ್ದಾರೆ. ಆದಾಗ್ಯೂ ಬಹುಮಟ್ಟಿಗೆ ಅವರನ್ನು ರಾಜಕೀಯ ವಲಯದಿಂದ ದೂರ ಇಡಲಾಗಿದೆ. ಇಂದು ನಾವು ನೋಡುತ್ತಿದ್ದಂತೆ, ರಾಜಕೀಯ ಪುರುಷರ ಭದ್ರಕೋಟೆಯಾಗಿ ಕಂಡುಬರುತ್ತಿದೆ. ಸಂಸತ್‌ಗಳು ಹಾಗೂ ಶಾಸನಗಳ ಸ್ವರೂಪವೇ ಇದಕ್ಕೆ ನಿದರ್ಶನ.

ಭಾರತದಲ್ಲಿ ಲೋಕಸಭೆಯ ಸದಸ್ಯರ ಒಟ್ಟು ಸಂಖ್ಯಾಬಲದ ಶೇಕಡ 8 ಕ್ಕಿಂತ ಕಡಿಮೆ ಮಹಿಳೆಯರಿದ್ದಾರೆ. ನಾರ್ಡಿಕ ದೇಶಗಳನ್ನು ಹೊರತು ಪಡಿಸಿದರೆ, ವಿಶ್ವದ ಬಹುತೇಕ ರಾಷ್ಟ್ರಗಳಲ್ಲಿ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿಲ್ಲ.

ಜಗತ್ತಿನ ಸರ್ಕಾರಗಳ ಉನ್ನತವಲಯದಲ್ಲಿ ಮಹಿಳೆಯರ ಪ್ರಾತಿನಿಧ್ಯ ಶೇಕಡ 10 ಕ್ಕಿಂತ ಕಡಿಮೆ. 1990ರಲ್ಲಿ ವಿಶ್ವದ ಒಟ್ಟು ಸಂಪುಟ ದರ್ಜೆ ಸಚಿವರುಗಳಲ್ಲಿ ಶೇ. 3.5 ರಷ್ಟು ಮಹಿಳೆಯರಿದ್ದರು. 93 ರಾಷ್ಟ್ರಗಳಲ್ಲಿ ಮಹಿಳೆಯರು ಯಾವುದೇ ಸಚಿವ ಸ್ಥಾನ ಹೊಂದಿರಲಿಲ್ಲ. 50 ರಾಷ್ಟ್ರಗಳಲ್ಲಿ ಸರ್ಕಾರಗಳು ನಾಲ್ಕು ಉನ್ನತ ವಲಯಗಳಲ್ಲಿ ಮಹಿಳೆಯರಿಗೆ ಪ್ರಾತಿನಿಧ್ಯವೇ ಇರಲಿಲ್ಲ.

ವಿಶ್ವಸಂಸ್ಥೆ ಹಾಗೂ ಯುರೋಪಿಯನ್ ಸಮುದಾಯವೂ ಸೇರಿದಂತೆ ಅಂತರಾಷ್ಟ್ರೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ದೊರೆತಿರುವ ಪ್ರಾತಿನಿಧ್ಯ ಶೇ. 5 ಕ್ಕಿಂತ ಕಡಿಮೆ. ಕೆಲವು ಜನ ಮಹಿಳೆಯರು ತಮ್ಮ ದೇಶಗಳಲ್ಲಿ ಸರ್ಕಾರಗಳ ಉನ್ನತ ಸ್ಥಾನ ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ.

ಆದಾಗ್ಯೂ ಈ ಸ್ಥಾನಕ್ಕೆ ಏರಿದವರ ಸಂಖ್ಯೆ ಅತೀ ವಿರಳ ಎಂದೇ ಹೇಳಬಹುದು. ಪುರುಷರು ಹಾಗೂ ಮಹಿಳೆಯರ ದೈಹಿಕ ವ್ಯತ್ಯಾಸಗಳಿಂದಾಗಿ, ಮಹಿಳೆಯರು ಸಾಮೂಹಿಕ ಹಾಗೂ ರಾಜಕೀಯ ರಂಗಗಳಲ್ಲಿ ಅಬಲೆಯರಾಗಿದ್ದಾರೆಂದು ವಾದ ಮಂಡಿಸಲಾಗುತ್ತಿದೆ. ಇದೇ ಕಾರಣ ಮುಂದೆ ಮಾಡಿ, ಮಹಿಳೆಯರನ್ನು ಇತರ ವೃತ್ತಿಗಳಂತೆ, ರಾಜಕೀಯ ರಂಗದಿಂದಲೂ ದೂರ ಇಡಲು ಯತ್ನಿಸಲಾಗುತ್ತಿದೆ.

ಮಹಿಳೆಯರಿಗೆ ರಾಜಕೀಯ ಅರ್ಥವಾಗುವುದಿಲ್ಲ ಎಂಬ ನುಡಿ, ಸ್ವಾರ್ಥ ಸಾಧನೆಗಾಗಿ ಆಡುವ ಮಾತು ಎನಿಸುತ್ತದೆ. ಮಹಿಳೆಯರು ಪುರುಷರಿಗೆ ಸರಿ-ಸಮಾನರಾಗಿ ರಾಜಕೀಯದಲ್ಲಿ ಭಾಗವಹಿಸಲಾರರು ಎಂಬುದು ನಿಜವಲ್ಲ.

ಎಲ್ಲರಿಗೂ ಮತದಾನ ಹಕ್ಕು ನೀಡಲಾಗಿದೆ. ಎಲ್ಲ ಮಹಿಳೆಯರಿಗೂ ಮತದಾನ ಹಕ್ಕು ಇದೆ. ಈ ಹಕ್ಕನ್ನು ಅವರು ಜಾಣ್ಮೆಯಿಂದ ಚಲಾಯಿಸುತ್ತಲೂ ಇದ್ದಾರೆ. ಆದಾಗ್ಯೂ ಶಾಸನ ಸಭೆಗಳಲ್ಲಿ ಅವರ ಪ್ರಾತಿನಿಧ್ಯ ಸಾಕಷ್ಟು ಪ್ರಮಾಣದಲ್ಲಿ ಇಲ್ಲ. ರಾಜಕೀಯ ಪಕ್ಷಗಳು ಚುನಾವಣಾ ಸ್ಥಾನಗಳಿಗಾಗಿ, ಪುರುಷರಿಗೆ ಪ್ರಾಧ್ಯಾನ್ಯ ನೀಡುತ್ತಿವೆ. ಪುರುಷ ಅಭ್ಯರ್ಥಿಗಳೇ ಅಧಿಕ ಸಂಖ್ಯೆಯಲ್ಲಿ ಇರುತ್ತಾರೆ. ಮಹಿಳಾ ಅಭ್ಯರ್ಥಿಗಳ ಸಂಖ್ಯೆ ಕಡಿಮೆ ಅದರಲ್ಲೂ ಆಯ್ಕೆಯಾದ ಮಹಿಳಾ ಅಭ್ಯರ್ಥಿಗಳ ಸಂಖ್ಯೆ ಇನ್ನೂ ಕಡಿಮೆ.

ಇಂದು ಅನೇಕ ದೇಶಗಳಲ್ಲಿ ಸಂವಿಧಾನ ಹಾಗೂ ಕಾನೂನುಗಳು ಮಹಿಳೆಯರಿಗೆ ಸಮಾನ ಹಕ್ಕುಗಳ ಹಾಗೂ ಅವಕಾಶಗಳ ಭರವಸೆ ನೀಡಿವೆ. ಆದಾಗ್ಯೂ ಈ ಕಾನೂನು ಕಟ್ಟಳೆಗಳು ಈ ಭರವಸೆಯನ್ನು ಆಚರಣೆಗೆ ತರುವಲ್ಲಿ ಅಷ್ಟೇನೂ ಪರಿಣಾಮಕಾರಿಯಾಗಿಲ್ಲ. ಮಹಿಳೆಯರಿಗೆ ಭದ್ರತೆ ಹಾಗೂ ರಕ್ಷಣೆ ಇರುವಾಗಲೂ, ಅವರ ವಿಚಾರದಲ್ಲಿ ಲಿಂಗಭೇದ, ಪೂರ್ವಗ್ರಹ ದೃಷ್ಟಿ ಇನ್ನೂ ನಿವಾರಣೆಯಾಗಿಲ್ಲವೆನ್ನುವುದು ಖೇದದ ಸಂಗತಿ. ಮಹಿಳೆಯರ ರಾಜಕೀಯ ಉನ್ನತಿಗೆ ಮಾಡಬೇಕಾದ್ದು ಬಹಳಷ್ಟಿದೆ.

## ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆ

ದೇಶದಲ್ಲಿ ಈವರೆಗೆ ನಡೆದ ರಾಜಕೀಯ ಆಂದೋಳನಗಳ ಕಡೆಗೆ ಒಮ್ಮೆ ದೃಷ್ಟಿ ಹರಿಸಿದಾಗ, ಈ ಎಲ್ಲಾ ಆಂದೋಳನಗಳಲ್ಲಿ ಮಹಿಳೆಯರು ಪ್ರಭಾವಶಾಲಿ ಪಾತ್ರ ನಿರ್ವಹಿಸಿದ್ದನ್ನು ನಾವು ಕಾಣುತ್ತೇವೆ. ವಾಸ್ತವವಾಗಿ ಈ ಎಲ್ಲಾ ಪ್ರಮುಖ ಚಳುವಳಿಗಳಿಗೆ ಶಕ್ತಿ ತುಂಬುವಲ್ಲಿ ಹಾಗೂ ಅವು ಚೈತನ್ಯಶೀಲವಾಗಿ ಉಳಿಯುವಂತೆ ಮಾಡುವಲ್ಲಿ ಮಹಿಳೆಯರು ನಿರ್ಣಾಯಕವಾದ ಪಾತ್ರ ನಿರ್ವಹಿಸಿದ್ದಾರೆ.

ಭಾರತದ ಮಟ್ಟಿಗೆ ಹೇಳುವುದಾದರೆ, ಮಹಿಳೆಯರು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಿದ ಹಾಗೂ ಕೊಡುಗೆ ನೀಡಿದ, ಸುದೀರ್ಘವಾದ ಹೆಮ್ಮೆಪಡುವಂತಹ ಪರಂಪರೆ ಇದೆ.

ಸ್ವಾತಂತ್ರ್ಯ ಚಳುವಳಿಯ ದಿನಗಳಲ್ಲಿ ಡಾ॥ ಅನಿಬಸೆಂಟ್ ಹಾಗೂ ಸರೋಜಿನಿ ನಾಯ್ಡು ಅವರಂತಹ ಪ್ರತಿಭಾವಂತ ಮಹಿ

ಳೆಯರು ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ನೇತೃತ್ವ ವಹಿಸಿದ್ದರು. ಅನೇಕ ದೇಶಾಭಿಮಾನಿ ಮಹಿಳೆಯರು ರಾಷ್ಟ್ರೀಯ ಚಳುವಳಿಯಲ್ಲಿ ಧುಮುಕಿದರು.

ಮಹಾತ್ಮಾ ಗಾಂಧೀಜಿ ಅವರು ಬ್ರಿಟಿಷ್ ಸರ್ಕಾರದ ವಿರುದ್ಧ ಚಳುವಳಿಗೆ ಕರೆ ನೀಡಿದಾಗ, ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿನ ಸಾಮಾನ್ಯ ಮಹಿಳೆಯರು ಅತ್ಯಧಿಕ ಸಂಖ್ಯೆಯಲ್ಲಿ ಈ ಕರೆಗೆ ಓಗೊಟ್ಟರು.

ನೇತಾಜಿ ಸುಭಾಷ್‌ಚಂದ್ರ ಬೋಸ್ ಅವರ ಆಕರ್ಷಕ ವ್ಯಕ್ತಿತ್ವದಿಂದಾಗಿ ಅನೇಕ ಧೀರ ಮಹಿಳೆಯರು ಅಝೂದ್ ಹಿಂದ್ ಸೇನ್ ಸೇರಿದರು.

ಮಹಿಳೆಯರು ಅನೇಕ ಕ್ರಾಂತಿಕಾರಿ ಚಳುವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಅಮೂಲ್ಯ ಕೊಡುಗೆ ನೀಡಿದಾಗ್ಯೂ, ಹೊಸ ಸರ್ಕಾರಗಳಲ್ಲಿ ರಾಜಕೀಯ ಸ್ಥಾನಗಳಿಗೆ ಅವರು ನೇಮಕಗೊಂಡಿರುವುದು ವಿರಳವೆಂದು ಹೇಳಬಹುದು.

ಪುರುಷರು ಹಾಗೂ ಮಹಿಳೆಯರು ಸಮಾನ ಪಾಲುಗಾರಿಕೆ ವಿಚಾರಕ್ಕೆ ವಾಸ್ತವತೆಯ ರೂಪ ಕೊಡುವುದು ಮಹಿಳೆಯರಿಗೆ ಹೆಚ್ಚು ಅಧಿಕಾರ ನೀಡುವ ಮೂಲಕ ಈ ಕಲ್ಪನೆಗೆ ಮೂರ್ತ ರೂಪ ನೀಡುವುದು ಮುಂದಿನ ಸವಾಲಾಗಿದೆ.

**ಐತಿಹಾಸಿಕ ಮುನ್ನಡೆ**

ನಗರ ಹಾಗೂ ಗ್ರಾಮಾಂತರ ಪ್ರದೇಶಗಳ ಸ್ಥಳೀಯ ಸ್ವಯಮಾಡಳಿತ ಸಂಸ್ಥೆಗಳಲ್ಲಿ ಮೂರರಲ್ಲಿ ಒಂದು ಭಾಗದಷ್ಟು ಸ್ಥಾನಗಳನ್ನು ಮೀಸಲಾಗಿಡುವ ಮೂಲಕ ಭಾರತ ಈ ದಿಸೆಯಲ್ಲಿ ಮುನ್ನಡೆ ಸಾಧಿಸಿದೆ. ಇಂತಹ ಒಂದು ಗಮನಾರ್ಹ ಹಾಗೂ ಸಂವೈಧಾನಿಕ ಸುಧಾರಣೆಯಿಂದಾಗಿ ಇಂದು ಸ್ಥಳೀಯ ಸ್ವಯಮಾಡಳಿತ ಸಂಸ್ಥೆಗಳಲ್ಲಿ ಹತ್ತು ಲಕ್ಷಕ್ಕೂ ಹೆಚ್ಚು ಮಂದಿ ಮಹಿಳೆಯರು ನಿರ್ಣಯ ಕೈಗೊಳ್ಳುವ ಅಧಿಕಾರ ಪಡೆದಿದ್ದಾರೆ.

ಶಾಸನ ಸಭೆಗಳಲ್ಲಿ ಹಾಗೂ ಸಂಸತ್ತಿನಲ್ಲಿ ಇದೇ ಬಗೆಯ ಮೀಸಲಾತಿ ನೀಡುವುದಕ್ಕಾಗಿ ಈಗ ಚರ್ಚೆ ನಡೆಯುತ್ತಿದೆ. ರಾಜಕೀಯ ಪಕ್ಷಗಳು ಈ ಪ್ರಸ್ತಾವನೆಯನ್ನು ಅನುಮೋದಿಸಿವೆ. ಮುಂಬರುವ ಸಂಸತ್ತಿನ ಅಧಿವೇಶನದಲ್ಲೇ ಈ ದಿಸೆಯಲ್ಲಿ ಮಹತ್ವದ ಹೆಜ್ಜೆ ಇಡುವ ಸಂಭವವಿದೆ.

ಇಷ್ಟರಿಂದಲೇ ಮಹಿಳೆಯರ ಕ್ಷೇಮಾಭಿವೃದ್ಧಿ ಸಾಧಿಸಿದಂತಾಗುವುದಿಲ್ಲ. ಕೆಳಸ್ತರದಲ್ಲಿ ಮಹಿಳೆಯರು ಮೇಲೆ ಬರಲು ಇನ್ನೂ ಸಾಧ್ಯವಾಗುತ್ತಿಲ್ಲ. ಈ ಕೊರತೆ ನಿವಾರಣೆಗಾಗಿ ಮಾಡಬೇಕಾದ ಮೊದಲ ಕೆಲಸವೆಂದರೆ ಮಹಿಳೆಯರ ಬಗ್ಗೆ ಇರುವ ಪೂರ್ವಗ್ರಹ ಭಾವನೆಯನ್ನು ಕೈ ಬಿಡಬೇಕು. ರಾಜಕೀಯದಲ್ಲಿ ಮಹಿಳೆಯರು ಭಾಗವಹಿಸುವ ಬಗ್ಗೆ ಇರುವ ನಕಾರಾತ್ಮಕ ನಿಲುವು ಬದಲಾಗಬೇಕು.

ಮಹಿಳೆಯರಿಗೆ ಶಿಕ್ಷಣ, ತರಬೇತಿ ನೀಡಬೇಕು, ಈ ಮೂಲಕ ಅವರಲ್ಲಿ ಆತ್ಮಸ್ಥೈರ್ಯ ಬೆಳೆಸಬೇಕು. ಆರ್ಥಿಕ ಸ್ವಾತಂತ್ರ್ಯ ಹಾಗೂ ಭದ್ರತೆಗಳಿಸುವಂತೆ ಮಾಡಬೇಕು. ನಿರ್ಣಯ ಕೈಗೊಳ್ಳುವ ವಿಚಾರ ಬಂದಾಗ ಮಹಿಳೆಯರೂ ನಿರ್ಧಾರ ಕೈಗೊಳ್ಳುವಂತಾಗಬೇಕು ಅಂದಾಗ ಮಾತ್ರ ಅವರು ಅಭಿವೃದ್ಧಿಯ ಫಲ ಪಡೆಯಲು ಸಾಧ್ಯವಾಗುತ್ತದೆ.

ಮಹಿಳೆಯರ ಉನ್ನತಿಗಾಗಿ ಮಾಡಬೇಕಾದ್ದು ಬಹಳಷ್ಟಿದೆ. ಆದಾಗ್ಯೂ ಈಗ ಒಂದು ಹಂತವನ್ನು ತಲುಪಿದ್ದೇವೆ. ಮಹಿಳೆಯರು ರಾಜಕೀಯ ಶಿಕ್ಷಣದ ಮಹತ್ವ ಅರಿತುಕೊಳ್ಳತೊಡಗಿದ್ದಾರೆ. ಈ ಚಳವಳಿ ಬಲಪಡಿಸಲು ಶ್ರಮಿಸುತ್ತಿದ್ದಾರೆ. ಇದೊಂದು ಶುಭಾರಂಭ.

● **ಹುಲಿಮನೆ ಓ. ರಮೇಶ**

(ನಾಲ್ಕನೇ ಪುಟದಿಂದ) ಅಮೆ ಮನೆ ಕೃಷ್ಣಪ್ಪ ಶಿವರಾಯ್

ಬಯಕೆಇದೆ. ಅದಕ್ಕಾಗಿ ಅಶ್ವಿನಿಗೆ ಆಡಳಿತ ಸೇವಾ ಪರೀಕ್ಷೆಗಳಿಗೆ ಪೂರ್ವ ಸಿದ್ಧತೆಗಾಗಿ ಪ್ರೋತ್ಸಾಹವನ್ನು ಕೊಡುತ್ತಿದ್ದೇನೆ. ಮಗ ತನ್ನ ಕಾಲ ಮೇಲೆ ನಿಂತುಕೊಂಡರೆ ಸಾಕಾಗಿದೆ. ಚಂದ್ರಪ್ರಭಳಿಗೆ ಹಣೆಗೆ, ಚಿತ್ರ ಬರೆಯುವುದರಲ್ಲಿ ತುಂಬಾ ಆಸಕ್ತಿ. (ಮನೆ ಗೋಡೆಗಳಲ್ಲಿ ಕೆಲವು ಉತ್ತಮ ಚಿತ್ರಗಳು ಕಂಗೊಳಿಸುತ್ತಿತ್ತು) ಜೊತೆಗೆ ಒಬ್ಬ ಗೃಹಣಿಯಾಗಿ ಮನೆಯ ಪೂರ್ತಿ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಿದ್ದಾಳೆ. ನಮ್ಮ ಈ ತೂಗುಯ್ಯಾಲೆಯಲ್ಲಿ ಸಮಭಾಗವಾಗಿ ಹಂಚಿಕೊಂಡಿದ್ದೇವೆ.

ಸಂಗಾತಿ : ಕೊನೆಯದಾಗಿ ಈಗ ನೀವು ಸ್ವಲ್ಪ ಸಮಯದಲ್ಲಿ ನಿವೃತ್ತಿ ಹೊಂದಲಿದ್ದೀರಿ ಎಂಬುದು ತಿಳಿಯಿತು, ಹೌದೆ ? ಮುಂದೆ ಏನು ಮಾಡಬೇಕೆಂದಿದ್ದೀರಿ ?

ಉ : ನನ್ನ ನಿವೃತ್ತಿಗೆ ಇನ್ನೂ 9-10 ತಿಂಗಳು ಬಾಕಿಯಿದೆ. ನನ್ನ ನಿವೃತ್ತಿ ಜೀವನದಲ್ಲಿ, ಅರೆ ಭಾಷೆಗೆ ಹೆಚ್ಚು ಒತ್ತು ಕೊಟ್ಟು, ಸಮಾಜ ಸೇವೆಯಲ್ಲಿ ನನ್ನನ್ನು ನಾನು ತೊಡಗಿಸಿಕೊಳ್ಳಬೇಕೆಂದಿದ್ದೇನೆ. (ಎಲ್ಲಾ ನಮ್ಮ ಸಂಘಸಂಸ್ಥೆಗಳ ಮುಖಂಡರನ್ನು ಒಂದೆಡೆ ಸೇರಿಸಿ ಒಂದು ಬಲಿಷ್ಟ ಸಮಾಜ ಕಟ್ಟಬೇಕೆಂಬುದನ್ನು ಮನದಾಳದಲ್ಲಿ ಕಂಡೆವು)

ಹೀಗೆ ಕೆಲ ನಿಮಿಷಗಳು ಮಾತನಾಡಿದ 'ರಾಯ್' ಇಂದು ರಾಯಲ್ ಫ್ಯಾಮಿಲಿ ಆಗಿದ್ದಾರೆ. ಇವರಲ್ಲಿ ಎಲ್ಲಾ ಮಟ್ಟದ ಶ್ರೀಮಂತಿಕೆ ತುಂಬಿ ತುಳುಕುತ್ತಿದೆ. ಇದರಿಂದ ಒಬ್ಬ ಸೇನಾನಿಯ ಎಲ್ಲಾ ಗುಣಗಳನ್ನು ನಾವು ಕಂಡೆವು. ಹಣವಂತರು, ಹಣವಂತರಿಗೆ ಪ್ರಾಶಸ್ತ್ಯ ನೀಡುವುದನ್ನು ಬಿಡಬೇಕು. ಬಡವರಿಗೆ ಕೆಲವು ವಿಷಯಗಳ ಅವಕಾಶವನ್ನು ನೀಡಿ, ಸಮಾಜದ ಏಳಿಗೆಗೆ ಎಲ್ಲರು ಸಮಭಾಗಿಗಳಾಗಿ ದುಡಿಯೋಣ ಎಂದು ಹಾರೈಸುತ್ತಾ, ಗಡಸು ಮುಖದ ಕೊಂಬ ಮೀಸೆಯ, ಕಪ್ಪು ವರ್ಣದ ತಲೆಕೂದಲು ಸ್ವಲ್ಪ ಕುಳ್ಳಾದ, ಯಾವಾಗಲೂ ಹಣೆಗೆ ಕೆಂಪು ತಿಲಕವಿಟ್ಟುಕೊಳ್ಳುವ ಗಟ್ಟಿ ಮುಟ್ಟಾದ ಶರೀರದೊಂದಿಗೆ ಅಷ್ಟೇ ಸ್ಥಿರವಾದ ಹೆಜ್ಜೆಗಳನ್ನಿಡುತ್ತ ತಮ್ಮ ಸಂಸಾರ ಸಮೇತರಾಗಿ ನಮ್ಮನ್ನು ನಗುಮುಖದಲ್ಲಿ ಬೀಳ್ಕೊಟ್ಟಾಗ ನಮ್ಮ 'ಸಂಗಾತಿ' ಗೆ ಸಧೃಡ ವ್ಯಕ್ತಿಯ ಸಂಪೂರ್ಣ ಪರಿಚಯವಾಯಿತು. ಅವರಿಗೆ ನಮ್ಮ ನಮನಗಳು.

● : ಕಟ್ರತನ, ಜಯರಾಂ

# ಕೊಡಗಿನ ಕಾವೇರಿ ತೀರದ ಪ್ರವಾಸಿಗರ ದುಬಾರೆಯಲ್ಲಿ - ಗ್ರಾಮಕೂಟ / ಗೌಡ ಸಮ್ಮಿಲನ

ಗಾಂಭೀರ್ಯದಿಂದ ಸಾಗುತ್ತಿರುವ ಕಾವೇರಿ ಮಾತೆ, ಮೈ ಬಗ್ಗಿ ನಮಿಸುತ್ತಿರುವ ಮಾಮರದ ಸಾಲು, ಸ್ವಲ್ಪ ಅಂತರ ಬಿಟ್ಟು ಬಿದಿರ ಹಿಂಡುಗಳು, ಮಧ್ಯೆ ಮಳಲ ಹಾಸಿಗೆ. ಮೇಲೆ ಒಣಸೊಪ್ಪಿನ ಹೊದಿಕೆ ಅಲ್ಲಿ ಜನ ಸಮೂಹವೊಂದು ಕಲೆತು, ಬೆರೆತು ಕುಳಿತಿತ್ತು, ಒಣಸೊಪ್ಪೇ ಅವರಿಗೆ ಜಮಾಖಾನೆಯಾದರೆ, ಮಾಮರದ ಬೇರುಗಳೇ ವೇದಿಕೆ ಮತ್ತು ಆಸನವಾಗಿದ್ದವು. ಒಟ್ಟಿನಲ್ಲಿ ಅದೊಂದು ವಿಶಾಲ ನಿಸರ್ಗ ಧಾಮವಾಗಿತ್ತು.

ಇದು ಇತ್ತೀಚೆಗೆ ನಂಜರಾಯಪಟ್ಟಣ ಮತ್ತು ಹೊಸಪಟ್ಣ ಗ್ರಾಮಗಳ 'ಗೌಡಸಮ್ಮಿಲನ, ಕಾರ್ಯಕ್ರಮ 'ಕೊಡಗು ಸಂಗಾತಿ' ಕಂಡ ಬಗೆ, ನಿಸರ್ಗತಾಣಕ್ಕೆ ಹೆಸರಾಗಿರುವ ದುಬಾರೆಯ ಕಾವೇರಿ ತೀರದಲ್ಲಿ ಪ್ರತಿ ವರ್ಷವೂ ಈ ಗ್ರಾಮಗಳ ಗೌಡ ಜನ ಸಮಾವೇಶಗೊಳ್ಳುವರು, ಪರಸ್ಪರ ವಿಚಾರವಿನಿಮಯ ಮಾಡಿಕೊಳ್ಳುವರು. ಮಡಿದವರಿಗೆ ಸಂತಾಪ ಸೂಚಿಸುವರು. ಪ್ರತಿಭಾವಂತರನ್ನು, ಉದ್ಯೋಗದಿಂದ ನಿವೃತ್ತಗೊಂಡವರನ್ನು ಸನ್ಮಾನಿಸುವರು. ಕ್ಷಣಕಾಲ ಮೈಮರೆತು, ಜನಾಂಗದ ಹಿತ ಚಿಂತನೆಯಲ್ಲಿ ತೊಡಗುವರು.

ಈ ವರ್ಷದ ಸಮಾರಂಭದ ಮೊದಲು ಐಯ್ಯಂಡ್ರ ಲಲಿತಾರವರು ಪ್ರಾರ್ಥಿಸಿದರು, ಮೂಟೇರ ನಂಜುಂಡರವರು ಸಂತಾಪ ಸೂಚನೆಯನ್ನು ಮಂಡಿಸಿ, ಮಡಿದವರ ಆತ್ಮಕ್ಕೆ ಶಾಂತಿಕೋರಿ ಮೌನವನ್ನಾಚರಿಸಿ ಬಳಿಕ, ಸಮಾರಂಭಕ್ಕೆ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಕುಶಾಲನಗರದ ಬೀಷ್ಮಾಚಾರ್ಯರೆಂದು ಖ್ಯಾತಿ ಪಡೆದಿರುವ ಕುಮುಕುಳಿ ಸುಬ್ಬಯ್ಯನವರು ಮಾತನಾಡಿ ಪ್ರಚಾರದ ಕೊರತೆಯಿಂದ ನಮ್ಮ ಶಕ್ತಿ ಎಷ್ಟಿದೆ ಎಂಬುದು ನಮಗೇ ಗೊತ್ತಿಲ್ಲ, ನಮ್ಮ ಜನ ಕುಡಿತವನ್ನು ಕಡಿಮೆ ಮಾಡಿ ಮಕ್ಕಳಲ್ಲಿ ದುಡಿಯುವ ಆಸಕ್ತಿ ತುಂಬಿ, ಕುಟುಂಬದ ಸಾಮರಸ್ಯವನ್ನು ಕಾಪಾಡಿಕೊಂಡು ಬರಲು ಕರೆಕೊಟ್ಟರು. ಕೊಡಗು ಗೌಡ ಮಹಿಳೆಯರಲ್ಲಿ ಪ್ರಥಮ ಬಾರಿಗೆ ಜಿಲ್ಲಾಪಂಚಾಯತ್ ಉಪಾಧ್ಯಕ್ಷೆಯಾಗಿರುವ ಅಮೆ ಮನೆ ಕಮಲಾ ಗಣಪತಿಯವರು, ಅಲ್ಲಿಯ ಜನರ ಒಗ್ಗಟ್ಟನ್ನು ಶ್ಲಾಘಿಸಿ ತಾವು ಸಮಾಜ ಸೇವೆ ಮಾಡುವ ಭರವಸೆ ನೀಡಿದರು, ಕೊಡಗು ಸಂಗಾತಿಯ ಗೌರವ ವ್ಯವಸ್ಥಾಪಕ ಪಟ್ಟಡ ಪ್ರಭಾಕರ್‌ರವರು, ಪತ್ರಿಕೆಯ ಧ್ಯೇಯೋದ್ದೇಶಗಳನ್ನು ವಿವರಿಸಿ, ಪತ್ರಿಕೆಯು ಬೆಳೆಯಲು ಈ ಪತ್ರಿಕೆ ಮಾತ್ರವೇ ಗ್ರಾಮದ ಮೂಲೆ ಮೂಲೆಗೂ ತಲುಪಲು ಸಾಧ್ಯವೆಂದರು ಹಾಗೂ ಸಹಕರಿಸುವಂತೆ ಮನವಿ ಮಾಡಿದರು. ಕಾವೇರಿ ಸುಪುತ್ರ ನಿವೃತ್ತ ಮುಖ್ಯೋಪಾಧ್ಯಾಯರಾಗಿರುವ ಕೋಡಿ ಸುಭಾಷ್‌ರವರು ನಾವಿಂದು ಅನಾಗರಿಕತೆಯನ್ನು ನಾಶಗೊಳಿಸಿ ನಾಗರಿಕತೆಯತ್ತ ಮುನ್ನಡೆಯಬೇಕು. ಮಕ್ಕಳನ್ನು ಉತ್ತಮ ಪರಿಸರದಲ್ಲಿ ಬೆಳೆಯಲು ಅನುವು ಮಾಡಿಕೊಟ್ಟು ವಿದ್ಯಾವಂತರನ್ನಾಗಿ ಮಾಡಬೇಕೆಂದು ಕರೆಕೊಟ್ಟರು. ಪಟ್ಟಡ ಶಿವಕುಮಾರ್‌ರವರು ತಮ್ಮ ಕ್ರಾಂತಿಕಾರಿ ಮಾತುಗಳಿಂದ ಯುವಕರನ್ನು ಎಚ್ಚರಗೊಳಿಸಿದರು, ನಮ್ಮ ಸಂಸ್ಕೃತಿ, ಭಾಷೆ, ನೆಲೆ ನಾಶಗೊಂಡರೂ ಎದ್ದೇಳುತ್ತಿಲ್ಲ, ಕೊಡಗು ಗೌಡ ಕೊಡಗಿನಲ್ಲಿ ಇದ್ದಾನೋ ಇಲ್ಲವೋ ? ಎಂದು ಪ್ರಶ್ನಿಸಿದರು.

ಅಧ್ಯಕ್ಷ ಭಾಷಣ ಮಾಡಿದ ಮೂಟೇರ ನಂಜಪ್ಪನವರು ಮಾತನಾಡಿ ಇಂತಹ ಸಮಾರಂಭದ ಯಶಸ್ಸಿಗೆ ಮುಕ್ಕಾಟಿ ಲವಪ್ಪನಂತಹ ಯುವಕರೇ ಕಾರಣ ಎಂದು ಅಲ್ಲಿನ ಯುವಕರನ್ನು ಮೆಚ್ಚಿಕೊಂಡರು. ಕಾರ್ಯಕ್ರಮಕ್ಕೆ ಮೊದಲು ಕೆನ್ನಾರನ್ನ ಉತ್ತಯ್ಯನವರು ವರದಿ ಓದಿದರು ಕಾರ್ಯಕ್ರಮದ ಕೊನೆಯಲ್ಲಿ ಐಯ್ಯಂಡ್ರ ಲೋಕನಾಥರವರು ವಿಧಿವತ್ತಾಗಿ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯಗೊಳಿಸಿದರು.

ಕಾರ್ಯಕ್ರಮ ಅಂದಿಗೆ ಮುಗಿದರೂ ಮತ್ತೆ ಮತ್ತೆ ಬರುತ್ತದೆ, ಇದು ಅವರ ಹನ್ನೆರಡನೇ ವರ್ಷದ ಕಾರ್ಯಕ್ರಮವಾಗಿದ್ದು, ಅಲ್ಲಿನ ಜನ ಯಾವುದೇ ಕಾರ್ಯದಲ್ಲಿ ಯಶಕಂಡಾಗ ಅದರ ಪ್ರಯುಕ್ತ ಈ ಸಮ್ಮಿಲನಕ್ಕೆ ಕೊಡುಗೆಯನ್ನು ಸಲ್ಲಿಸುವರು. ನೊಮ್ಮಗುವಾದಾಗ, ಗಂಡು ಮಗುವಾದಾಗ, ವಾಹನ ಕೊಂಡಾಗ, ಉದ್ಯೋಗ ದೊರೆತಾಗ ಹೀಗೆ ದೊರೆತ ಹಣವನ್ನು ಸಂಗ್ರಹಿಸಿ, ಕಾರ್ಯಕ್ರಮವನ್ನು ಸಂಘಟಿಸಿ, ಸುಸೂತ್ರವಾಗಿ ನಡೆಸುವರು, ಅದಕ್ಕಾಗಿ ಪ್ರಶಾಂತ ಸ್ಥಳವನ್ನು ಆಯ್ದುಕೊಂಡಿದ್ದಾರೆ. ಒಂದು ಕಡೆ ಕಾಡಿನ ಮದ ಗಜಗಳ ನೀರಾಟ, ಮತ್ತೊಂದು ಕಡೆ ದೇಶ ವಿದೇಶಿ ಪ್ರವಾಸಿಗರ ಚೆಲ್ಲಾಟ, ಇದೆಲ್ಲದರ ನಡುವೆ ಮೌನವಾಗಿ ವಿಚಾರಗಳನ್ನು ಹಂಚಿಕೊಂಡು, ಪ್ರತಿಭೆಗಳನ್ನು ಪ್ರೋತ್ಸಾಹಿಸಿ, ಪ್ರಗತಿಯ ದಾರಿಯನ್ನು ಸೃಷ್ಟಿಸಿಕೊಳ್ಳುತ್ತಿರುವುದು, ಬೇರೆಲ್ಲೂ ಕಾಣಸಿಗುವುದು ಅಪರೂಪ. ಈ ವಿಚಾರದಲ್ಲಿ ನಂಜರಾಯಪಟ್ಟಣದ ಜನರು ಆದರ್ಶ ಜೀವಿಗಳು. ಈ ಆದರ್ಶವನ್ನು ಎಲ್ಲಾ ಕೊಡಗು ಗೌಡ ನಿವಾಸಿಗಳು ಬೆಳೆಸಬೇಕೆಂದು ಕೊಡಗು ಸಂಗಾತಿ ಬಯಸುತ್ತದೆ.

# ಬಾಲ ಪ್ರತಿಭೆ - ಕೊಡಗನ ಬಾಲಕೃಷ್ಣ ಚಂದನ್

ಮೈಸೂರಿನ ಹೆಬ್ಬಾಳಿನಲ್ಲಿ ವಾಸವಾಗಿರುವ ಶ್ರೀಮತಿ ಮತ್ತು ಶ್ರೀ ಕೊಡಗನ ಬಾಲಕೃಷ್ಣ ಲಲಿತ ದಂಪತಿಗಳ ಇಬ್ಬರು ಮಕ್ಕಳಲ್ಲಿ ಒಬ್ಬನಾದ ಚಂದನ್ ಮತ್ತು ರಚನಾ ಸುಖ ಸಂಸಾರದ 2 ಕಣ್ಣುಗಳು.

ಅವರಲ್ಲಿ ಚಂದನ್ ಈಗ ಎಂಟನೇ ತರಗತಿ ಪಾಸಾಗಿದ್ದಾನೆ. ಜೆ.ಎಸ್.ಎಸ್. ಮೇಟಗಳ್ಳಿ, ಮೈಸೂರಿನಲ್ಲಿ ವಿಧ್ಯಾಭ್ಯಾಸ ಮುಂದುವರಿಸುತ್ತಿದ್ದಾನೆ. ಮೂರ್ತಿ ಚಿಕ್ಕದಾದರೂ ಕೀರ್ತಿಯ ಮೆಟ್ಟಿಲೇರುತ್ತಿರುವ ಇವನಿಗೆ ಕರಾಟೆ ಮೈಗೂಡಿಸಿಕೊಂಡು ಬಂದಿರುವ ಕಲೆಯಾಗಿದೆ. ಪಿಷ್ಟ ಇಂಡಿಯಾ ಕೂಟ ಸ್ಕೂಲ್, ಗಂಗೋತ್ರಿಯಲ್ಲಿ ಮೈ ಮನವನ್ನು ನೆಟ್ಟಿದ್ದಾನೆ. ಸಕಾಲದಲ್ಲಿ ಪಂಚ್‌ಗಳನ್ನು ಎದುರಾಳಿಗೆ ಕೊಡುತ್ತಾ, ಹಲವು ಪದಕ, ಮೆಡಲ್‌ಗಳನ್ನು ತನ್ನದಾಗಿರಿಸಿಕೊಂಡು, ಬ್ಲೂಬೆಲ್ಟ್‌ನಿಂದ ಬ್ರೌನ್ 4ನೇ ಬೆಲ್ಟ್‌ಗೆ ಮುಂದುವರೆಯುತ್ತಿದ್ದಾನೆ. 25-30 ಕೆ. ಜಿ. ಒಳಗಿನ ವಿಭಾಗದಲ್ಲಿ ರಾಷ್ಟ್ರಮಟ್ಟದಲ್ಲಿ ನಡೆದ ಪಂದ್ಯಕ್ಕೆ 1995 ರಲ್ಲಿ 2ನೇ ಸ್ಥಾನ ಬೆಂಗಳೂರಿನಲ್ಲಿ ದೊರೆತಿದೆ. (ಫೋಟೋದಲ್ಲಿಬಲಗೈಯಲ್ಲಿರುವ ಪ್ರಶಸ್ತಿ) ಮತ್ತು ಆಲ್ ಇಂಡಿಯಾ ಕರಾಟೆ ಪಂದ್ಯಕ್ಕೆ 1996ರಲ್ಲಿ ಒಂದು ಬೆಳ್ಳಿಯ ಪದಕವನ್ನು ತನ್ನದಾಗಿರಿಸಿಕೊಂಡಿದ್ದಾನೆ. (ಎಡಗೈನಲ್ಲಿರುವುದು ಆಲ್ ಇಂಡಿಯಾ ಕರಾಟೆ ಪಂದ್ಯದ ಮತ್ತೊಂದು ಪ್ರಶಸ್ತಿ) ತನ್ನ ಕತ್ತಿನಲ್ಲಿ ನೇತಾಡಿಸಿಕೊಂಡಿರುವ ಪದಕಗಳನ್ನು ಮೈಸೂರು, ಬೆಂಗಳೂರು ಹಾಗೇ ರಾಜ್ಯದ ಹಲವು ಕಡೆಗಳಿಂದ ಪಡೆದ ಪ್ರಶಸ್ತಿಗಳು.

ಇವನಿಗೆ ಕ್ರಿಕೇಟ್ ಎಂದರೆ ತುಂಬ ಮೆಚ್ಚಿಗೆಯ ಆಟ. ಆದರೂ ಕರಾಟೆಯಲ್ಲಿಯೇ ಪ್ರಾಶಸ್ತ್ಯವನ್ನು ಗಳಿಸಿ ವಿದೇಶಗಳಿಗೆ (ಜಪಾನ್‌ಗೆ) ಹೋಗಬೇಕೆಂಬ ಹೆಬ್ಬಯಕೆ. ಚಂದನ್ ಹೇಳುವಂತೆ ನಾನೊಬ್ಬ ದಕ್ಷ ಪೋಲಿಸ್ ಅಧಿಕಾರಿಯಾಗಿ ದೇಶಸೇವೆ ಮಾಡಬೇಕೆನ್ನುವುದಾಗಿದೆ. ಆದರೆ ಶ್ರೀಮತಿ ಲಲಿತರವರಿಗೆ ನನ್ನ ಮಗ ಒಬ್ಬ ಮೈಕಾನಿಕಲ್ ಇಂಜಿನೀಯರ್ ಆದರೆ ಅವನ ಭವಿಷ್ಯ ಉತ್ತಮವಾಗಬಹುದು ಎನ್ನುತ್ತಾರೆ. ಬಾಲಣ್ಣನವರು ಕಾರ್ಖಾನೆಯಲ್ಲಿ ವ್ಯಸ್ಥಾಪಕನಾಗಿದ್ದುಕೊಂಡು, ಉತ್ತಮ ಸಲಹೆಗಾರನ ಪ್ರಶಸ್ತಿ ಪಡೆದಿದ್ದಾರೆ. ಹೀಗಿದ್ದರು ಮಗನನ್ನು ಅವನ ಇಷ್ಟಕ್ಕೆ ಬಿಡಬೇಕು ಎನ್ನುತ್ತಾರೆ. ಒಬ್ಬ ಸಭ್ಯ ಗೃಹಿಣಿಯಾಗಿ ಲಲಿತರವರು ಇಂದು ತನ್ನ ಮಗನ ಆಗುಹೋಗುಗಳ ಬಗ್ಗೆ ಹೆಚ್ಚಿನ ಗಮನ ಹರಿಸಿದ್ದಾರೆ.

ಚಂದನ್‌ಗೆ ಅರೆಭಾಷೆಯನ್ನು (ಚಂದನ್ ಎಂದರೆ ಮಲೆಯಾಳಂ ಭಾಷೆಯಲ್ಲಿ ಶ್ರಿಗಂಧ ಅಥವ ಪರಿಮಳ) ರಾಷ್ಟ್ರಮಟ್ಟದಲ್ಲಿ ಬೆಳೆಸಬೇಕು ಎಂಬ ಮನಸ್ಸಿದೆ. ಅದಕ್ಕಾಗಿ ಅವನು ಮನೆಯಲ್ಲಿ ಹೆಚ್ಚಾಗಿ ಅರೆಭಾಷೆಯನ್ನೇ ಮಾತನಾಡುವುದನ್ನು 'ಸಂಗಾತಿ' ನೋಡಿದೆ.

ಚಂದನ್ ಮುಂದೆ ಒಬ್ಬ ಕೀರ್ತಿವಂತ ವ್ಯಕ್ತಿಯಾಗಿ ಬೆಳೆಯಲೆಂದು ಜನಾಂಗದ ಪರವಾಗಿ 'ಸಂಗಾತಿ' ಹಾರೈಸುತ್ತದೆ.



ಕರಾಟೆ ಮಾ|| ಚಂದನ್

● **ಕಟ್ರತನ ಜಯರಾಂ.**

# 'ಕೊಡಗು ಸಂಗಾತಿ'ಯ ಅವಶ್ಯಕತೆ ಮತ್ತು ಅನಿವಾರ್ಯ

1997ರ ಏಪ್ರಿಲ್ ತಿಂಗಳ 9ನೆಯ ತಾರೀಖಿನಂದು, ಮೈಸೂರಿನಿಂದ ಪ್ರಕಟಣೆಗೊಂಡು, ಬೆಳಕಿಗೆ ಬಂದ 'ಕೊಡಗು ಸಂಗಾತಿ' ಎಂಬ ಪಾಕ್ಷಿಕ ಪತ್ರಿಕೆಯನ್ನು ನೋಡಿ ನನ್ನಲ್ಲಿ ಸಂತೋಷ ಮತ್ತು ಆತಂಕಗಳೆರಡು ಏಕಕಾಲದಲ್ಲಿ ಮೂಡಿ ಪತ್ರಿಕೆಯ ಬಗ್ಗೆ ಚಿಂತಿಸುವಂತೆ ಮಾಡಿತು. ಸಂಪಾದಕರು ತಮ್ಮ ಸಂಪಾದಕೀಯದಲ್ಲಿ "ಕನ್ನಡ ಮತ್ತು ಗೌಡಗನ್ನಡದ ಅಭಿವೃದ್ಧಿಗಾಗಿ ಮತ್ತು ಗೌಡರ ಭಾಷೆ, ಸಂಸ್ಕೃತಿಗೆ ಒತ್ತುಕೊಟ್ಟು ಅವುಗಳ ಶ್ರೇಯಸ್ಸಿಗಾಗಿ ದುಡಿಯುವ ದಿಶೆಯಲ್ಲಿ ಇಂತಹ ಪತ್ರಿಕೆಯ ಅವಶ್ಯಕತೆ"ಯ ಬಗ್ಗೆ ತಮ್ಮ ವಿಚಾರವನ್ನು ಮಂಡಿಸಿದ್ದಾರೆ. ಅವರ ಅಭಿಪ್ರಾಯಗಳಿಗೆ ಒತ್ತುಕೊಡುವ ದೃಷ್ಟಿಯಿಂದ ಈ ಲೇಖನವನ್ನು ಬರೆಯುತ್ತಿರುವುದಾಗಿದೆ.

ಗೌಡಭಾಷೆಯ ಬಗ್ಗೆ – ಭಾಷೆ ಎಂದರೆ ಏನು ? "ಪರಸ್ಪರ ಚಿಂತನೆಗಳ ವಿನಿಮಯಕ್ಕೆ ಇರುವ ಮಾಧ್ಯಮವೇ ಭಾಷೆ". Language is a Medium for Exchange of our thought) ಆದರೆ ಇಂದು ಗೌಡ ಭಾಷೆ ತನ್ನ ಅವನತಿಯ ಅಂಚಿನಲ್ಲಿದೆ. ಇದಕ್ಕೆ ಕಾರಣ ಭಾಷೆಯ ಅರ್ಥದ ಬಗ್ಗೆ ನಮ್ಮಲ್ಲಿರುವ ಪೌಢ್ಯತೆ ಮತ್ತು ಕೀಳರಿಮೆ ಹಾಗೂ ಇತರ ಭಾಷೆಗಳ ಮೇಲೆ ನಮ್ಮಲ್ಲಿರುವ ವ್ಯಾಮೋಹ. ಈ ದಿಸೆಯಲ್ಲಿ ಗೌಡ ಜನಾಂಗ ಮುಖ್ಯವಾಗಿ ಅರಿಯಬೇಕಾದ ಅಂಶವೆಂದರೆ ಗೌಡಭಾಷೆ/ಹಳೆಗನ್ನಡ/ಅರೆ ಭಾಷೆ ಅತ್ಯಂತ ಮುಂದುವರಿದ ಭಾಷೆ. ಕನ್ನಡ ಭಾಷೆಯು ಸಂಕ್ಷಿಪ್ತ ರೂಪವೆಂಬುದನ್ನು ಲ್ಯಾಟೀನ್-ಗ್ರೀಕ್ ಭಾಷೆಗಳ ಸಂಕ್ಷಿಪ್ತರೂಪವಾದ ಇಂಗ್ಲೀಷ್ ಎಷ್ಟೊಂದು ಪ್ರಬುದ್ಧ ಭಾಷೆಎನಿಸಿಕೊಂಡಿದಿಯೋ, ಅಂತೆಯೇ ನಮ್ಮ ಅರೆಭಾಷೆ ಕೂಡ. ಆದರೆ ನಾವು ನಮ್ಮ ಭಾಷೆಯ ಬಗ್ಗೆ ಹೊಂದಿರುವ ನಿಲುವಾದರೇನು ? ಅರೆಭಾಷೆ ಕೇವಲ ನಾಡು ಜನರ ಭಾಷೆ ! ಕೇವಲ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ಪ್ರಾದೇಶಿಕ ಭಾಷೆ ಎಂದು ! ಉದ್ಯೋಗಸ್ಥರಾಗಲೀ, ಶ್ರೀಮಂತರಾಗಲೀ ಈ ಭಾಷೆಯನ್ನು ಮಾತನಾಡುವುದಿಲ್ಲ. (ಕೆಲವು ಅಭಿಮಾನಿಗಳು ಮಾತನಾಡುತ್ತಾರೆ) ಮಾತನಾಡುವುದೆಂದರೆ ಅವರಲ್ಲಿ ಅಪರಾಧಿ ಮನೋಭಾವನೆ. ಒಂದಂಶವನ್ನು ಇಲ್ಲಿ ಪ್ರತಿಯೊಬ್ಬ ಯೋಚಿಸಬೇಕಾದುದು ಇಷ್ಟೆ. "ತನ್ನ ತಾಯಿ ಭಾಷೆಯನ್ನು ಮರೆಯುವುದು, ಕಡೆಗಾಣಿಸುವುದು, ತನ್ನ ತಾಯಿಯನ್ನೆ ಕಡೆಗಾಣಿಸಿದಂತೆ". ಈ ಸಂದರ್ಭದಲ್ಲಿ ಭಾಷೆಯನ್ನು ಅಭಿವೃದ್ಧಿಪಡಿಸಲು, ಪ್ರಚಾರಪಡಿಸಲು ಒಂದು ಪತ್ರಿಕೆಯ ಅವಶ್ಯಕತೆ ಇದೆ. ಇದಕ್ಕಾಗಿ ಕೊಡಗು ಸಂಗಾತಿಯನ್ನು ಜನಾಂಗ ಪ್ರೋತ್ಸಾಹಿಸಬೇಕಾಗಿದೆ.

ನಮ್ಮ ಸಂಸ್ಕೃತಿ ಬಗ್ಗೆ, "ನಮ್ಮ ಭಾಷೆ ನಡವಳಿಕೆ ಆಚಾರ, ವಿಚಾರ, ಉಡುಗೆ ತೊಡುಗೆ ಆಹಾರ ಪದ್ಧತಿಗಳೇ ಸಂಸ್ಕೃತಿ" ಡಾ|| ಐ. ಮ. ಮುತ್ತಣ್ಣನವರು ಹೇಳುವಂತೆ "ಕೊಡಗಿನ ಸಂಸ್ಕೃತಿಯನ್ನು ಚಾಚುತಪ್ಪದೆ ಅನುಸರಿಸಿದ ಜನಾಂಗವೇ ಗೌಡಜನಾಂಗ". ಇದು ಅಕ್ಷರಶಃ ಸತ್ಯ ಕೂಡ. ಹಲವು ಗೌಡರು, ಕೊಡವ ಭಾಷೆಯನ್ನು ನಿರರ್ಗಳವಾಗಿ ಮಾತನಾಡಬಲ್ಲರು. ಆದರೆ ಅರೆ ಭಾಷೆ ಮಾತನಾಡಲು ಅವರಿಂದ ಸಾಧ್ಯವಿಲ್ಲ !. ಕೊಡಗಿನ ಕಲೆಯಾದ ಉಮ್ಮತಾಟ, ಬೊಳಕಾಟ, ಪೀಲಿಯಾಟ್‌ಗಳನ್ನು ಆಡಬಲ್ಲರು. ಬಾಳೊ ಪಾಟ್‌ಗಳನ್ನು ಹಾಡಬಲ್ಲರು. ಆದರೆ ನಮ್ಮದೆ ಆದ ಸೋಬಾನೆಗಳಾಗಲಿ, ಭಗವತಗಳನ್ನಾಗಲಿ, ಹಾಡುವುದಾಗಲಿ ನಮ್ಮಿಂದ ಸಾಧ್ಯವಿಲ್ಲ. ನಮ್ಮ ಉಡುಗೆ ತೊಡುಗೆಗಳು ಕೂಡ ಇಂದು ಮಾಯವಾಗಿದೆ. ಧೃಡನಿಲುವಿನ ತನ್ನತನ, ಸ್ವಂತಿಕೆ ಇಂದು ಇಲ್ಲ. ಹಬ್ಬ ಹರಿದಿನಗಳಲ್ಲಿ ಕೂಡ ನಮ್ಮ ಸಂಸ್ಕೃತಿಯ ಪ್ರತಿಬಿಂಬವಾದ ಸಾಂಪ್ರದಾಯಿಕ ಉಡುಗೆ ತೊಡುಗೆಗಳಿಲ್ಲ ಇದಕ್ಕೆ ಕಾರಣ ಬೇರೆ ಸಂಸ್ಕೃತಿಯ ಪ್ರಭಾವ ಮತ್ತು ನಮ್ಮ ಸಂಸ್ಕೃತಿಯ ಬಗೆಗಿನ ಕೀಳರಿಮೆ. ನಮ್ಮ ಜನಾಂಗ ಒಂದಂಶವನ್ನು ಇಲ್ಲಿ ಮನಗಾಣಬೇಕು. "ನಾವು ಇತರರ ಸಂಸ್ಕೃತಿಯನ್ನು ಪ್ರೀತಿಸಬೇಕು. ಆದರೆ ನಮ್ಮ ಸಂಸ್ಕೃತಿಯಲ್ಲಿಯೇ ಜೀವಿಸಬೇಕು". ಈ ದಿಶೆಯಲ್ಲಿ ನಮ್ಮ ಸಂಸ್ಕೃತಿಯನ್ನು ಜನರಿಗೆ ಪರಿಚಯಿಸಬೇಕು. ನಮ್ಮ ಹಬ್ಬಗಳಾದ, ಕಿಡ್ಡಾಸ (ಲಕ್ಷ್ಮಿ ಪೂಜೆ), ಬಿಶು, ಯುಗಾದಿ, ಕೈಲುಪೋಳ್ದ್, ಹುತ್ರಿ, ಕಾವೇರಿ ಸಂಕ್ರಮಣ, ಸುಬ್ರಹ್ಮಣ್ಯ ಷಷ್ಟಿ ಹರಿಸೇವೆ, ಕೆಂಚರಾಯನ ಸೇವೆ ಮುಂತಾದ ಹಬ್ಬಗಳ ಬಗ್ಗೆ ಜನರಿಗೆ ತಿಳುವಳಿಕೆ ನೀಡುವ ಕಾರ್ಯವನ್ನು ನಾವು ಕೈಗೆತ್ತಿಕೊಳ್ಳಬೇಕಾಗಿದೆ. ಇದಕ್ಕಾಗಿ ನಮ್ಮ ಪತ್ರಿಕೆಯಾದ 'ಕೊಡಗು ಸಂಗಾತಿ'ಯ ಅವಶ್ಯಕತೆಇದೆ. ಮತ್ತು ಈ ಕಾರ್ಯವನ್ನು ತನ್ನ ಆದ್ಯ ಕರ್ತವ್ಯವೆಂದು ಭಾವಿಸಿ ಪತ್ರಿಕೆ ಕಾರ್ಯ ನಿರ್ವಹಿಸಬೇಕಾಗಿದೆ.

ಮೇಲಿನ ಅಂಶಗಳು ನನ್ನ ಸಂತೋಷಕ್ಕೆ ಕಾರಣವಾದರೆ (ಮೇಲೆ ತಿಳಿಸಿದ

ಲೋಪಗಳನ್ನು ಸರಿಪಡಿಸಲು ಪತ್ರಿಕೆ ಹುಟ್ಟಿದೆ ಎಂಬುದಕ್ಕಾಗಿ) ನನ್ನ ಆತಂಕಕ್ಕೆ ಹಲವು ಕಾರಣಗಳಿವೆ. ಮುಖ್ಯವಾಗಿ ಪತ್ರಿಕಾ ಪ್ರಪಂಚದ ಬಗ್ಗೆ. ಇಂದು ಪತ್ರಿಕೆಗಳು 'ಅಣಬೆ'ಗಳು ಹುಟ್ಟಿದಂತೆ ಹುಟ್ಟುತ್ತಿವೆ. ಅಷ್ಟೇ ಬೇಗನೆ ಅಂತ್ಯ ಕೂಡ ಕಾಣುತ್ತಿವೆ. ಕಾರಣ ರಾಜಕೀಯ ಹಸ್ತಕ್ಷೇಪ, ಎಲೆಕ್ಟ್ರಾನಿಕ್ ಮಾಧ್ಯಮಗಳ ಪ್ರಗತಿ, ಓದುಗರ ಕೊರತೆ ಮತ್ತು ಪೈಪೋಟಿ. ಪತ್ರಿಕೆಯೊಂದು ಶಾಶ್ವತವಾಗಿ ನೆಲೆ ಊರಬೇಕಾದರೆ, ಒಂದಲ್ಲೊಂದು ರಾಜಕೀಯ ಪಕ್ಷ ಅಥವ ಮರೀಣರ ಸುಪರ್ದಿಯಲ್ಲಿರಬೇಕು. ಹೀಗಾದಲ್ಲಿ ಪತ್ರಿಕೆಗಳು ತಮ್ಮ ಧರ್ಮವಾದ ನಿಷ್ಪಕ್ಷಪಾತತೆ ಮತ್ತು ಸ್ವಾತಂತ್ರ್ಯತೆಯನ್ನು ಕಾಪಾಡಿಕೊಳ್ಳಲು ಅಸಾಧ್ಯ. ಎಲೆಕ್ಟ್ರಾನ್ ಮಾಧ್ಯಮಗಳಾದ ದೂರದರ್ಶನ ಮತ್ತು ಆಕಾಶವಾಣಿಗಳು ಓದುಗರನ್ನು ಪ್ರೇಕ್ಷಕರನ್ನಾಗಿ ಮಾಡಿಬಿಟ್ಟಿವೆ. ಸ್ಯಾಟ್‌ಲೈಟ್ ಮಾಧ್ಯಮವು ಬಂದ ನಂತರ ಜನ ತಮ್ಮ ಓದುವ ಹವ್ಯಾಸವನ್ನೆ ಮರೆತುಬಿಟ್ಟಿದ್ದಾರೆ. ಈ ದಿಶೆಯಲ್ಲಿ ಓದುಗರನ್ನು ಸೃಷ್ಟಿಸುವುದು ಪತ್ರಿಕೆಯ ಪ್ರೌಢತೆ ಮತ್ತು ಕ್ರಿಯಾಶೀಲತೆಯನ್ನು ಅವಲಂಬಿಸಿರುತ್ತದೆ. ಇಂದಿನ ತಾಂತ್ರಿಕತೆ ಮತ್ತು ವೈಜ್ಞಾನಿಕ ಅಭಿವೃದ್ಧಿಯಿಂದಾಗಿ ಮಾನವ ಜೀವನ ಕೂಡ ಯಾಂತ್ರಿಕವಾಗಿಬಿಟ್ಟಿದೆ. ಈ ಜಂಜಾಟಗಳ ನಡುವೆ ಓದುಗರ ಸಂಖ್ಯೆ ದಿನದಿಂದ ದಿನಕ್ಕೆ ಇಳಿಮುಖವಾಗುತ್ತಿದೆ. ಹಾಗೆಯೇ ಇಂದಿನ ಜಗತ್ತು ಪೈಪೋಟಿಮಯ ಜಗತ್ತು. ಇಂದು ಪತ್ರಿಕೆಗಳು ಓದುಗರನ್ನು ತನ್ನ ಕಡೆಗೆ ಸೆಳೆಯಬೇಕಾದರೆ 'ಬೆಲೆ' ಅಲಂಕಾರ, ಪ್ರಚಾರ ವಿಷಯಗಳಲ್ಲಿ ಇನ್ನೊಂದು ಪತ್ರಿಕೆಯೊಂದಿಗೆ ಪೈಪೋಟಿ ನಡೆಸಿ ಜಯಿಸಬೇಕಾದ ಅನಿವಾರ್ಯತೆ ಕಂಡುಬರುತ್ತಿದೆ. ಇಂತಹ ಸಂದರ್ಭದಲ್ಲಿ ಒಂದು ಜನಾಂಗದ ಭಾಷೆ, ಸಂಸ್ಕೃತಿಯ ಅಭಿವೃದ್ಧಿಗೆ ಒತ್ತುಕೊಡುವ ದೃಷ್ಟಿಯಿಂದ ಒಂದು ಪತ್ರಿಕೆ ಉಗಮಿಸಿದಾಗ ಹಲವು ಹತ್ತು ಕಡೆ ಚಿಂತಿಸುವಂತಾಗಿ ಆತಂಕ ಹುಟ್ಟುವುದು ಸಹಜ.

ಒಟ್ಟಿನಲ್ಲಿ ಸದುದ್ದೇಶದಿಂದ ಜನ್ಮತಾಳಿದ "ಕೊಡಗು ಸಂಗಾತಿ" ಪತ್ರಿಕೆ ಜನಾಂಗದ ಬೆಂಬಲ ಪಡೆದು ಯಶಸ್ಸು ಸಾಧಿಸಲಿ. ಪತ್ರಿಕೆಯ ಉಳಿವು ಅಳಿವು ಜನಾಂಗವನ್ನು ಅವಲಂಬಿಸಿದೆ. ಈ ದಿಶೆಯಲ್ಲಿ ಜನಾಂಗ ನಮ್ಮದೆ ಆದ ಪತ್ರಿಕೆಯನ್ನು ಬೆಂಬಲಿಸಿ ಶಾಶ್ವತ ನೆಲೆಯೂರುವಂತೆ ಮಾಡಲಿ. ಆ ಒಂದು ಬೆಂಬಲವನ್ನು ನೀಡುವ ಔದಾರ್ಯವನ್ನು ಕುಲದೇವತೆ ಅವರಿಗೆ ನೀಡಲಿ ಎಂಬುದೆ ನನ್ನ ಅರಿಕೆ.

● **ಕೆ.ಜಿ. ಅಶ್ವಿನಿಕುಮಾರ್, ಬಾಳಲೆ**

## ನಾಮಕರಣ

ಹುಲಿಮನೆ ರಮೇಶ ಮತ್ತು ಗುಣವತಿ ದಂಪತಿಗಳಿಗೆ ದಿನಾಂಕ 27-2-97ರಂದು ಹೆಣ್ಣು ಮಗುವಿನ ಜನನವಾಗಿರುತ್ತದೆ. ತಾ॥ 17-5-97 ರಂದು ಮಗುವಿನ ನಾಮಕರಣವನ್ನು ಪದಕಲ್ಲು, ಅವೆ ಮಂಜುನಾಥ್ ರವರ ನಿವಾಸದಲ್ಲಿ ಏರ್ಪಡಿಸಲಾಗಿದೆ. ಈ ಸಂದರ್ಭದಲ್ಲಿ 'ಕೊಡಗು ಸಂಗಾತಿ' ಪತ್ರಿಕಾಬಳಗ ತುಂಬು ಶುಭಾಶಯವನ್ನು ಕೋರುತ್ತದೆ. ರಮೇಶ್‌ರವರು ಈ ಪತ್ರಿಕೆಯ ಸಹಸಂಪಾದಕರಾಗಿರುವರು.

## ಶುಭ ವಿವಾಹ

ಕಟ್ರತನ ದಿ॥ ಭೀಮಯ್ಯ, ಪೋಸ್ಟ್ ಮಾಸ್ಟರ್ ಸೋಮವಾರಪೇಟೆ ಅವರ ಪ್ರಥಮ ಪುತ್ರಿ ಚಿ॥ ಸೌ॥ **ಹಂಸಕಲಾ** ಉಪಧ್ಯಾಯನಿ ಇವರ ವಿವಾಹವು ಚಿ॥ ರಾ॥ **ಶೇಷಪ್ಪ** ಉಪಾಧ್ಯಾಯರು, ಉ. ಚೆಂಬು ಗ್ರಾಮ ಇವರೊಂದಿಗೆ ತಾ॥ 15-5-97 ರಂದು ಶ್ರೀ ಬಸವೇಶ್ವರ ದೇವಸ್ಥಾನ ಸೋಮವಾರಪೇಟೆಯಲ್ಲಿ ನೆರವೇರಲಿದೆ.



## ಹಿರಿಯರು/ಯುವಕರು ಮತ್ತು ಕಿರಿಯರಿಗೆ

**ಲೇಖನಗಳನ್ನು ಸೃಷ್ಟಿಸುವಕಲೆ ಹುಟ್ಟಿನಿಂದಲೇ ಬಂದುದಲ್ಲ, ಲೇಖನಿ ಹಿಡಿದು ಕುಳಿತರೆ ಅದು ನಿಮಗೂ ಸಾಧ್ಯ. ನಿಮ್ಮ ಯಾವುದೇ ಬರಹಗಳನ್ನು ನಿಮಗೆ ತಿಳಿದ ಶೈಲಿಯಲ್ಲಿಯೇ ಬರೆದು ನಮ್ಮ ಕಾರ್ಯಾಲಯಕ್ಕೆ ಕಳುಹಿಸಿ. ಚಿಂತನೆ, ವಿಚಾರ ಲೇಖನ, ಧಾರ್ಮಿಕ, ಸಾಂಸ್ಕೃತಿಕ ಶೈಕ್ಷಣಿಕ, ಕೃಷಿಕ, ಹಾಸ್ಯ, ಕವನ, ಇತ್ಯಾದಿಗಳು ಕನ್ನಡ, ಅರೆಭಾಷೆ (ಗೌಡಗನ್ನಡ)ವೇ ಆಗಿರಲಿ. ಕಿರಿಯರಿಗೆ ಹೆಚ್ಚಿನ ಪ್ರಾಶಸ್ತ್ಯವಿದೆ.**

**-ಸಂ.**

# ನಂಜರಾಯಪಟ್ಟಣದ ಶ್ರೀ ನಂಜುಂಡೇಶ್ವರ ಸ್ವಾಮಿ

ಶ್ರೀ ನಂಜುಂಡೇಶ್ವರ ದೇವಸ್ಥಾನವು ಕ್ರಿ. ಶ. 1502-1525ರಲ್ಲಿ ಚೆಂಗಾಳ್ವ ಮನೆತನದ ನಂಜರಾಜನ ಪುತ್ರ ನಂಜುಂಡ ಅರಸನಿಂದ ನಿರ್ಮಾಣಗೊಂಡಿದ್ದು ಚರಿತ್ರೆಯಿಂದ ಹಾಗೂ ಶಿಲಾಶಾಸನಗಳಿಂದ ತಿಳಿದು ಬಂದಿದೆ. ಹಿಂದಿನ ರಾಜರ ಆಳ್ವಿಕೆ ಕಾಲದಲ್ಲಿ ನಂಜರಾಯಪಟ್ಟಣವು ಇವರ ರಾಜಧಾನಿಯಾಗಿತ್ತು ಎಂಬುದನ್ನು ಚರಿತ್ರೆ ಹಾಗೂ ಶಿಲಾಶಾಸನಗಳು ಇಂದಿಗೂ ತಿಳಿಸುತ್ತಿದೆ. ಈ ದೇವಸ್ಥಾನ ಅಲ್ಲದೆ ಶ್ರೀ ವೀರಭದ್ರನ ದೇಗುಲ, ಶ್ರೀ ಆಂಜನೇಯ ಗುಡಿ, ಶ್ರೀ ಪಟ್ಲಮ್ಮನ ಗುಡಿ, ಶ್ರೀ ಭಕ್ತನಕೋಟೆ, ಶ್ರೀ ಪಂಚಲಿಂಗೇಶ್ವರ ದೇವಸ್ಥಾನ, (ಅಮ್ಮಳೆ) ಶ್ರೀ ಮಾರಿಯಮ್ಮನ ಗುಡಿ ಹೀಗೆ ಹಲವು ಗುಡಿಗಳು ಇದ್ದು ಕೆಲವು ನೆಲಸಮ ವಾಗಿರುವ ಕುರುಹುಗಳಿವೆ.

ಪುರಾತನ ವಾಸ್ತುಶಿಲ್ಪಾಧಾರಿತ ಹಾಗೂ ಸತ್ಯಮಯ ದೇವಾಲಯವು ಕಾಲ ಗರ್ಭದಲ್ಲಿ ಹುದಗಿ 15 ವರ್ಷಗಳಿಂದ ಪೂಜೆ ಪುರಸ್ಕಾರವಿಲ್ಲದ ಧಾರ್ಮಿಕ ವಿಧಿವಿಧಾನಗಳ ಆಚರಣೆಯಿಲ್ಲದೆ ದೇವಾಲಯ ಶಿಥಿಲಾವಸ್ಥೆ ಹೊಂದಿದು ದಿನೇದಿನೇ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಪರಿಸ್ಥಿತಿಯಲ್ಲಿದೆ. ಶ್ರೀ ಶಿವಾನಂದ ಶಿವಯೋಗಿ ರಾಜೇಂದ್ರ ಮಹಾಸ್ವಾಮಿಗಳು ಸುಕ್ಷೇತ್ರ ಕೋಡಿಮಠ ಹಾರ್ನಳ್ಳಿ, ಅರಸೀಕೆರೆ ತಾಲ್ಲೂಕು ಇವರ ಸಲಹೆಯಂತೆ ಶ್ರೀ ಕ್ಷೇತ್ರ ಶ್ರೀ ಧರ್ಮಸ್ಥಳದ ಡಿ. ವೀರೇಂದ್ರ ಹೆಗ್ಗಡೆಯವರ ಸಂಪೂರ್ಣ ಸಹಕಾರ ಹಾಗೂ ಸ್ಥಳೀಯ ಜನಗಳ ಮತ್ತು ಘನಸರ್ಕಾರದ ನೆರವಿನೊಂದಿಗೆ ಸುಮಾರು 7-8 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಪುನರ್ ನಿರ್ಮಾಣಗೊಂಡಿದ್ದು ಈಗ ದೇವಾಲಯದ ಜೀರ್ಣೋದ್ಧಾರದಪ್ರಾರಂಭೋತ್ಸವವನ್ನು ಇದೇ ತಿಂಗಳ 27, 28, 29-5-1997 ಈ ಮೂರು ದಿನಗಳಲ್ಲಿ ಶಾಸ್ತ್ರೋಕ್ತವಾಗಿ ಪ್ರಾರಂಬಿಸಲು ನಿಶ್ಚಯಿಸಲಾಗಿದೆ.

ಇದು ಅಲ್ಲದೆ ಇದೇ ದೇವಸ್ಥಾನವಲ್ಲಿ ಶಿಥಿಲಗೊಂಡಿರುವ ಶ್ರೀ ಸುಬ್ರಮಣ್ಯಸ್ವಾಮಿ ಮತ್ತು ಕನ್ನಂಬಾಡಿಯಮ್ಮ ಈ ದೇವರುಗಳ ನೂತನ ವಿಗ್ರಹಗಳನ್ನು ಪ್ರತಿಸ್ಥಾಪಿಸಿರಬೇಕಾಗುತ್ತದೆ ಮತ್ತು ದೇವಾಲಯದ ಗೋಪುರದ ಮಹಾ ಕುಂಬಾಭಿಷೇಕವನ್ನು ಏರ್ಪಡಿಸಬೇಕಾಗಿರುತ್ತದೆ. ಈ ಎಲ್ಲಾ ಕಾರ್ಯಕ್ರಮಗಳಿಗೆ 2ಲಕ್ಷ ರೂಪಾಯಿ ಖರ್ಚು ಅಂದಾಜು ಮಾಡಲಾಗಿದೆ.

ಸಮಸ್ತ ಮಹಾಜನಗಳು ದೇವಾಲಯದ 472 ವರ್ಷಗಳ ಇತಿಹಾಸವುಳ್ಳ, ಈಗ ಶಿಥಿಲ ವಾಗಿರುವ ಈ ಜೀರ್ಣೋದ್ಧಾರದ ಕಾರ್ಯಕ್ರಮಕ್ಕೆ ತಮ್ಮ ಕೈಲಾದ ತನು, ಮನ, ಧನ ಸೇವೆಯನ್ನು ನಿರೀಕ್ಷಿಸಲಾಗಿದೆ.

ಈ ಪುಣ್ಯ ಕಾರ್ಯಕ್ರಮದಲ್ಲಿ ಭಾಗವಹಿಸಿ ಶ್ರೀ ಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಕೋರುತ್ತೇವೆ.

**ಮೂಟೇರ ನಂಜುಂಡ**
ಅಧ್ಯಕ್ಷರು
ಶ್ರೀ ನಂಜುಂಡೇಶ್ವರ ದೇವರ ದೇವಸ್ಥಾನ ಸಮಿತಿ
ನಂಜರಾಯಪಟ್ಟಣ, ಉ. ಕೊಡಗು.

---

ಸೂಕ್ತಿ :-

**"ಕಷ್ಟಗಳು ಬರುವುದು ಸುಖಾಗಮನದ ಸೂಚನೆ"**

- ಮಹಾತ್ಮ ಗಾಂಧಿ.

---

— ಸವಿ ನೆನಪು —

## ಶ್ರೀಮತಿ ಪಟ್ಟಡ ಮುತ್ತಣ್ಣ ನೀಲಮ್ಮ

ನೀವು ದಿನಾಂಕ 6-5-1974ರಲ್ಲಿ ಕಣ್ಮರೆಯಾಗಿ
23 ವರ್ಷಗಳು ಗತಿಸಿದರೂ, ನೀವು ತೋರಿಸಿಕೊಟ್ಟ
ದಾರಿಯಲ್ಲಿ ಕಾರ್ಯಮಗ್ನವಾಗಿರುವ
ನಮ್ಮೆಲ್ಲರನ್ನು ಹರಸು ತಾಯಿ.

**ಪಟ್ಟಡ ಉಲ್ಲಾಸ**
ಮತ್ತು ಸಹೋದರ, ಸಹೋದರಿಯರು.

# ಪಾಲೂರು ಗ್ರಾಮದ ಶ್ರೀ ಕನ್ನಂಬಾಡಿ ಅಮ್ಮನವರ ಚರಿತ್ರೆ

ಪಾಲೂರು ಮಡಿಕೇರಿ ತಾಲ್ಲೂಕಿನಲ್ಲಿರುವ ಒಂದು ಚಿಕ್ಕ ಗ್ರಾಮ. ಮಡಿಕೇರಿಯಿಂದ 15 ಕಿ. ಮೀ. ದೂರದಲ್ಲಿರುವ ಈ ಗ್ರಾಮ 40 ಜಮ್ಮಾ ಒಕ್ಕಲುಗಳಿಂದ ಕೂಡಿದ್ದು 'ಹಾಲಿನಂತ ಊರು' ಪಾಲೂರು ಎಂದು ಹೆಸರುವಾಸಿಯಾಗಿದ್ದ ಕಾಲವೊಂದಿತ್ತು. ಶ್ರೀ ಮಹಾಲಿಂಗೇಶ್ವರಸ್ವಾಮಿಯ ದೇವಸ್ಥಾನ ತನ್ನದೇ ಆದ ಶ್ರೀಸ್ಮೃತಿಯನ್ನು ಹೊಂದಿ ನಾಡ ದೇವರಾಗಿ ಈ ಊರಿನ ಜನರ ರಕ್ಷಕನಾಗಿದ್ದಾನೆ.

ಹಿಂದೂ ದೇಶದಲ್ಲಿ ಪ್ರಿಯೊಂದು ಹಳ್ಳಿಗೊಂದು ದೇವರಿದ್ದಾನೆ. ಹಳ್ಳಿಯಿಂದ ದಿಲ್ಲಿಯವರೆಗೆ ಹೋಗಿ ದುಡಿದ ಯಾವನೇ ಆದರೂ ತನ್ನ ಹಳ್ಳಿಯ ದೇವರನ್ನೇ ನಿತ್ಯ ಮನದಲ್ಲಿ ಪ್ರಾರ್ಥಿಸಿಕೊಂಡಿರುತ್ತಾನೆ. ಹಳ್ಳಿಯ ಕೊಳ್ಳಿದೇವತೆಯೂ ತನ್ನದೇ ಆದ ಪ್ರಾಶ್ಯಸ್ತ್ಯವನ್ನು ಪಡೆದುಕೊಂಡಿರುತ್ತದೆ.

ಕೊಡಗಿನಲ್ಲಿರುವ ದೇವಸ್ಥಾನ ಅಥವಾ ಮೂರ್ತಿಗಳ ಆದಿನೆಲೆ ಕೇರಳ, ದ.ಕ.ಜಿಲ್ಲೆಯವು ಎಂದು ಚರಿತ್ರೆ ಹೇಳುತ್ತವೆ. ಆದರೆ ಪಾಲೂರು ಶ್ರೀ ಕನ್ನಂಬಾಡಿ ಅಮ್ಮನವರ ವಿಗ್ರಹವನ್ನು ಕನ್ನಂಬಾಡಿಯಿಂದ ತಂದು ನೆಲೆ ಮಾಡಿಸಿದ್ದಾಗಿದೆ. ಕೊಡಗಿನ ಕೊನೆಯ ರಾಜರ ಕಾಲಕ್ಕೂ ಹಿಂದೆ ಅಂದರೆ ಸುಮಾರು ಒಂದುವರೆ ಶತಮಾನಗಳ ಹಿಂದೆ ವಾಟೇರಿ ಒಕ್ಕಲಿಗ–ದಾಸವಂಶದವರು ಮೈಸೂರು ಸೀಮೆಯ ಕನ್ನಂಬಾಡಿಯಿಂದ ತನ್ನ ಆರಾಧಿತ ದೇವಿಯ ಬೆಳ್ಳಿಯ ವಿಗ್ರಹದೊಂದಿಗೆ ಬಂದು ಪಾಲೂರು ಗ್ರಾಮದ ಸೂದನ ಶ್ರೀ ಮಾದಪ್ಪನವರ ಮತ್ತು ಭೀಮಂಡ ಈರಪ್ಪನವರ ಆಸ್ತಿಯ ಜಾಗದಲ್ಲಿ ನೆಲೆ ಸ್ಥಾಪಿಸಿದ್ದಾಗಿತ್ತು ಎಂದು ಚರಿತ್ರೆಯ ಮೂಲಕ ತಿಳಿಯುತ್ತದೆ. ಒಕ್ಕಲಿಗರ ಕೃಷ್ಣಯ್ಯನವರ ಮನೆಯ ಒಂದು ಪ್ರತ್ಯೇಕ ಕೋಣೆಯನ್ನು ದೇವರ ಕೋಣೆಯಾಗಿ ಮಾಡಿ, ನಿತ್ಯ ಪೂಜೆ, ಕರ್ಮಾದಿಗಳು ನಡೆಯುತ್ತಿದ್ದವಂತೆ. ಶ್ರೀಮಂತ ವಂಶದವರಾಗಿದ್ದ ಒಕ್ಕಲಿಗ ದಾಸಕುಟುಂಬವು ಭರ್ಜರಿಯ ಕಲ್ಲಿನ ಕೆತ್ತನೆಯ ಕಂಬಗಳನ್ನು ಜೋಡಿಸಿ ಮನೆ ಕಟ್ಟಿದ್ದರಂತೆ. ಕೃಷ್ಣಯ್ಯನವರ ಮೊಮ್ಮಗ ಲಿಂಗಣ್ಣ ತದನಂತರ ಅವರ ಕೊನೆಯ ಗಂಡು ಸಂತತಿ 'ಭೀಮ'ನ ಕಾಲದಲ್ಲಿ ಶ್ರೀಮಂತಿಕೆ ಹೊರಟು ಹೋಗಿತ್ತು. ಕೃಷ್ಣಯ್ಯ ಮತ್ತು ಅವರ ತಮ್ಮನಾದ ನಾಗಯ್ಯನ ಕಾಲದಲ್ಲಿ ಅಂದರೆ ಸುಮಾರು 1835-1850 ರವರೆಗೆ ಶ್ರೀ ಕನ್ನಂಬಾಡಿ ದೇವಿಯ ಉತ್ಸವ ಚೆನ್ನಾಗಿ ನಡೆಯುತ್ತಿದ್ದರಬಹುದು ಎಂದು ಗ್ರಹಿಸಲಾಗಿದೆ. ಆನಂತರ ಅವರ ಮೊಮ್ಮಕ್ಕಳ ಕಾಲಕ್ಕೆ ಸ್ಥಿತಿಗತಿ ಭಾರೀ ಹೀನಸ್ಥಿತಿಗಳಿದ್ದು ದೇವಿ ವಿಗ್ರಹವನ್ನು ಬೈತಡ್ಕ ಕುಟುಂಬದ ಹೊನ್ನಣನ ಕಾಲದಲ್ಲಿ ವಾಟೇರಿ ಒಕ್ಕಲಿಗರ ವಂಶದಿಂದ ಬಂದುದ್ದಾಗಿದೆ ಎಂದು ತಿಳಿಯುತ್ತದೆ. ಪ್ರತಿವರ್ಷ ಮೇ 24ಕ್ಕೆ ನಡೆದು ಬರುತ್ತಿರುವ ದೇವಿಯ ಉತ್ಸವದ ಸಮಯದಲ್ಲಿ ನೀರು ಬತ್ತಿಹೋಗುತ್ತಿದ್ದಾಗ ಜಳಕಕ್ಕೆ ಬೈತಡ್ಕ ಕುಳದ 'ಹೊನ್ನಣ್ಣ'ನವರ ಆಸ್ತಿಯ ಪಕ್ಕದಲ್ಲಿ ಹರಿಯುವ ನದಿಗೆ ಬರುತ್ತಿತ್ತು. ಚಿನ್ನದ ತಾಳಿ ಕಟ್ಟಿ ವಿಗ್ರಹ ಪಡೆದ್ದರಿಂದ ಚಿನ್ನಕೊಟ್ಟವರು (ಚಿನ್ನಕೊಟ್ಟವರು) ಎಂದು ಬೈತಡ್ಕ ಮನೆಯವರನ್ನು ಇಂದೂ ಕರೆಯುವುದುಂಟು ಬಹುಶಃ ಶ್ರೀ ಹೊನ್ನಣ್ಣನವರು ಪರಮ ಸೇವಾಭಕ್ತ. ದಾನಿಯಾಗಿದ್ದಿರಬೇಕು. ಬೈತಡ್ಕ ಮಣ್ಣಿನಲ್ಲಿ ದೇವಿಯ ನಲೆನಿಂತು 1/14 ಶತಮಾನಕ್ಕಿಂತಲೂ ಜಾಸ್ತಿಯಾಗಿದೆ ಎಂದು ಅಂದಾಜು ಮಾಡಲಾಗಿದೆ. ನದಿಯ ಪಕ್ಕದಲ್ಲಿ ಹೊನ್ನಣ್ಣನವರ ಹಿರಿಯರ ಮನೆಯಿದ್ದಿರಬೇಕು. ವಾಟೇರಿ ಒಕ್ಕಲಿಗರು ಜಳಕಕ್ಕಾಗಿ ನದಿಗೆ ಬರುತ್ತಿದ್ದಾಗ ದಾರಿ ಬದಿಯಲ್ಲಿ ವಾಸಿಸುತ್ತಿದ್ದ ಇವರು ಒಡ್ಡೋಲಗದೊಂದಿಗೆ ಬರುತ್ತಿದ್ದ ದೇವಿಯ ಗೋಷ್ಠಿಯನ್ನು ಭಕ್ತಿಯಿಂದ ಎದುರುಗೊಳ್ಳುತ್ತಿದ್ದಿರಬೇಕು. ಹಾಗೇನೆ ಬರಬರುತ್ತಾ ಅತ್ತ ಭಕ್ತಿಯು ಕುಂಟುತ್ತಾ ಇತ್ತ ಭಕ್ತಿಗೆ ಒಲಿದ ದೇವಿಯು ಬೈತಡ್ಕ ಕುಟುಂಬದಲ್ಲಿ ಇಡೀ ಊರು ದೇವತೆಯಾಗಿ ನೆಲೆ ಪಡೆದುದ್ದಾಗಿದೆ. ದೇವಿಯ ಗುಡಿಯು ಪ್ರತ್ಯೇಕವಿದ್ದರೂ ಕುಟುಂಬದ ಐನ್ ಮನೆ ಯಲ್ಲಿತನಗೆ ಪ್ರತ್ಯೇಕ ಕೋಣೆಯನ್ನು ಕೇಳಿ ಪಡೆದು ಇಂದಿಗೂ ಅದೇ ರೀತಿ ನಡೆಯುತ್ತಾಬರುಬರುತ್ತದೆ.

ಕಾಶಿ ಗೋಕರ್ಣದಲ್ಲಿ ಹುಟ್ಟಿ, ದಕ್ಷಿಣಕ್ಕೆ ದಯಮಾಡಿ ಕನ್ನಂಬಾಡಿಯಲ್ಲಿ ಉದ್ಭವಿಸಿ, ಅಲ್ಲಿಂದ ಪಶ್ಚಿಮಕ್ಕೆ ತಿರುಗಿ ಕಾವೇರಿಯಾತ್ರೆ ಮಾಳ್ಪೇ॥ ಮುಂದೆಪೂರ್ವಕ್ಕೆ ಹಿಂತಿರುಗಿ ಹಾಲಿನಂತ ಈ ಪಾಲೂರಿನಲ್ಲಿ ನೆಲೆಗೊಂಡೆ ಎಂದು ದೇವಿಯ ಮೈವರಿಕೆ ಬರುವವನು, ಎತ್ತಿದ ಸ್ವರದಲ್ಲಿ ಊರಿನ ಜನರಿಗೆ ಆಶೀರ್ವಾದ ವಾಕ್ಯ ನುಡಿಯುವಾಗ ಮೈ ರೋಮಾಂಚನವಾಗುತ್ತದೆ. ಈಕೆಯ ಕಲ್ಲಿನ ವಿಗ್ರಹವನ್ನು ಕನ್ನಂಬಾಡಿಯಿಂದ 1940ರ ಅಂದಾಜಿಗೆ ತಂದದ್ದು ಎಂದು ಹೇಳುತ್ತಾರೆ. ಊರೊಳಗೆ ಚಿಕ್ಕ ಭಕ್ತರ ತಂಡ ರಚಿಸಿ, ದಿ| ಪೈಕೇರ ಈರಪ್ಪ ಮುನಿಸಿಯವರ ಸೂಕ್ತಮಾರ್ಗದರ್ಶನದಲ್ಲಿ ಮೈಸೂರು ಸೀಮೆಯ ಕನ್ನಂಬಾಡಿಯಿಂದ ಕಲ್ಲಿನ ವಿಗ್ರಹವನ್ನು ಬಸ್ಸಿನಲ್ಲೇ ತಂದು ಬೆಟ್ಟಗೇರಿಯಲ್ಲಿ ಇಳಿಸಿ, ಅಲ್ಲಿಂದ ಮೊಟ್ಟ ಮೊದಲಿಗೆ ಪುದಿಯನೆರವನ ದಿ| ಕಾಳಪ್ಪನವರು ಆ ವಿಗ್ರಹವನ್ನು ತಲೆಮೇಲೆ

ಹೊತ್ತದ್ದು. ಅನಂತರ ಬೈತಡ್ಕ ಮಾದಪ್ಪನವರು ಹೊತ್ತು ಮನೆಯವರೆಗೆ ತಂದದ್ದು ಎಂದು ಹೇಳುತ್ತಾರೆ. ದೇವಿಯ ಕಲ್ಲಿನ ವಿಗ್ರಹ ಭಾರೀ ಭಾರವಿರುವುದರಿಂದ ಇತ್ತೀಚಿನ ವರುಷಗಳಿಂದ ಬೆಳ್ಳಿ ವಿಗ್ರಹವನ್ನೆ ಜಳಕಕ್ಕೆ ಕೊಂಡೊಯ್ಯುವುದು ರೂಢಿಯಾಗಿದೆ. ದಿ॥ ಬೈತಡ್ಕ ಮಾದಪ್ಪನವರು ಸುಮಾರು 40-45 ವರ್ಷಗಳ ಕಾಲ ದೇವಿಯ ವಾಹನ ಕಾರ್ಯ ಮಾಡಿದ್ದಾರೆ. ಈಗಲೂ ಅವರ ಸಂತತಿಯವರಿಂದ ಈ ಕಾರ್ಯ ನಡೆಯುತ್ತಿದೆ. ಜಳಕಕ್ಕೆ ಹೋಗುವ ಸ್ತೋಮ ಬಹಳ ಅಂದವಾಗಿರುತ್ತದೆ. ಈ ಅಂದವನ್ನು ಸ್ವತಃ ನೋಡಿದರನೇ ಚೆಂದ.

ಹಿಂದಿನ ಕಾಲದಲ್ಲಿ ಜನರಲ್ಲಿ ಭಕ್ತಿ ಅಪಾರವಿತ್ತು. ದೇವಿಯ ಶಕ್ತಿಯೂ ಹಾಗೆನೇ ಇತ್ತು. ಈಗಲೂ ಶಕ್ತಿ ಇದೆ. ಬೂದಿಯೊಳಗಿನ ಕೆಂಡದಂತೆ. ನಂಬಿದವನಿಗೆ ಇಂಬು, ನಂಬದವನಿಗೆ ಅಂಬು ಎಂಬಂತೆ ನಂಬಿದ ಭಕ್ತಾಧಿಗಳು ಇಂದೂ ಶಕ್ತಿಯನ್ನು ದೇವಿಯಲ್ಲಿ ಕಂಡುಕೊಂಡಿದ್ದಾರೆ. ಐನ್ ಮನೆಯಲ್ಲಿ ಹಿರಿಯವನಾದವರು ನಿತ್ಯ 2 ಹೊತ್ತು ದೀಪ ದೂಪಾದಿಗಳಿಂದ ಪೂಜೆ ಮಾಡುತ್ತಾರೆ. 40 ಒಕ್ಕಲುಗಳಿಗೆ ವರ್ಷದಲ್ಲಿ 12 ಸಂಕ್ರಮಣಗಳು 40ಒಕ್ಕಲುಗಳಿಂದ ಪೂಜೆ ಕಡ್ಡಾಯವಾಗಿ ನಡೆಯುವ ಕ್ರಮ, 40 ಒಕ್ಕಲುಗಳು 12 ಸಂಕ್ರಮಣ ಪೂಜೆಗಳನ್ನು ಹಂಚಿಕೊಂಡಾ 3 ಒಕ್ಕಲುಗಳಿಗೊಂದು ಪೂಜೆ ಸಿಗುತ್ತದೆ. ಮೇ 24ಕ್ಕೆ ಆಗುವ ವಾರ್ಷಿಕ ಹಬ್ಬದಲ್ಲಿ ಥಾನಿಗಳಿಂದ ಬಡಿಸುವ ಊಟೋಪಚಾರವೂ ರಾತ್ರಿ 7 ರೊಳಗೆ ಇರುತ್ತದೆ.

ಪ್ರತೀ ಸಂಕ್ರಮಣ ಪೂಜೆ ನಿತ್ಯ ನಡೆಯಲೇಬೇಕು. ಹಿಂದೆ ಒಗ್ಗಟ್ಟಿನಿಂದ ಕ್ರಮಬದ್ಧವಾಗಿ ನಡೆಯುತ್ತಿತ್ತು. ದೇವಿಗೆ ಹಾಲು ನೈವೇದ್ಯ ಸ್ವೀಕೃತ. ಪ್ರತೀ ವಾರ್ಷಿಕ ಉತ್ಸವ ಮೇ 24ಕ್ಕೆ ದೇವಿಯ ನೂರಾರು ಇಷ್ಟ ಮೂರ್ತಿಗಳಿಗಾಗಿ 2-4 ಕಾಲುಗಳ ಚೆಟಿ ಬೀಳುವುದುಂಟು. ಆ ದಿನ ಸಂಜೆ 4 ರಿಂದ ಮಾರನೆ ದಿನ ಬೆಳಿಗ್ಗೆ 8 ರವರೆಗೆ ಉತ್ಸವ ಕಾರ್ಯವಿರುತ್ತದೆ. ಹರಿಕೆಹೊತ್ತ ಭಕ್ತಾಧಿಗಳು ತುಂಬಾ ಸಂಖ್ಯೆಯಲ್ಲಿ ಸೇರಿ, ಊರು ಜನರು ಮಾಡುವ ಸಕಲ ದೇವರ ಕಾರ್ಯಗಳನ್ನು ಒಗ್ಗಟ್ಟಿನಲ್ಲಿ ಮಾಡುವ ಕ್ರಮ. ಚೇಟಿ ಬಿದ್ದ ನಂತರ ಮುಂಜಾನೆ ತನಕ ಅದನ್ನು ಶುಚಿಮಾಡಿ ಪ್ರಸಾದ ರೀತಿ ನೆರೆದಿರುವ ಜನರಿಗೆಲ್ಲ ಹಂಚುವ ತನಕ ತುಂಬಾ ಕೆಲಸವಿರುತ್ತದೆ. ತಾ॥ 25ರಂದು ಮಾರಿಗೆ ಗಾವು ನೀಕುವ ಕಾರ್ಯವಿರುತ್ತದೆ. 26 ರಂದು ದೇವರ ಭಂಢಾರ ನೋಡುವುದೊಂದಿಗೆ ವಾರ್ಷಿಕ ಉತ್ಸವ ಅಂತ್ಯಗೊಳ್ಳುತ್ತದೆ.

ಹಿಂದಿನ ಕಾಲದಲ್ಲಿ ಅದೆಷ್ಟೋ ಕಾಣಿಕೆ ಕಾಣುತ್ತಿತ್ತು. ಈ ದಿನಗಳಲ್ಲಿ ಕಮ್ಮಿಯಾಗಿದೆ ಎಂಬ ವಾಡಿಕೆಯ ವಿಚಾರವನ್ನು ಮುಂದಿಟ್ಟಾಗ ಇದು ಕಲಿಕಾಲ ಎಲ್ಲೆಲ್ಲೂ ಅಸತ್ಯ, ಮೋಸ, ಅಶಿಸ್ತು ಕಲಹಗಳಿಂದ ಹೀಗಾಗಿದೆ ಅನ್ನುತ್ತಾರೆ ಊರಿನ ಹಿರಿಯ ವ್ಯಕ್ತಿ 94ರ ಹರೆಯದ ಶ್ರೀ ಸೂದನ ಮಾದಪ್ಪನವರು.

● ಬೈತಡ್ಕ ಐಯ್ಯಪ್ಪ ಬೆಳ್ಯಪ್ಪ

# ನಿಮ್ಮ ಪತ್ರಗಳು

### ಪೀಳಿಗೆಗೆ ಆಶಾದಾಯಕ

ತಡವಾಗಿಯಾದರೂ ಈ ಸಂಚಿಕೆ ಹೊರಬಂದದ್ದು ಮುಂದಿನ ಪೀಳಿಗೆಗೆ ಆಶಾದಾಯಕ. ಮುಖ ಪುಟದ ಚಿತ್ರವು ಸಂಪ್ರದಾಯವನ್ನು ತೋರಿಸುವುದು. ಈ ಸಂಚಿಕೆ ಕೊಡಗಿನ ಕೊಡಗಿನ ಸರ್ವತೋಮುಖ ಬೆಳವಣಿಗೆಗೆ ಪಣ ತೊಡಲಿ.

ಒಂದು ಜನಾಂಗ ಬೆಳೆಯಬೇಕಾದರೆ ಅದರ ಭಾಷೆ, ಉಡುಪು, ಸಂಸ್ಕೃತಿ ಇವು ಮುಖ್ಯ. ಇದನ್ನು ನೋಡಿದೊಡನೆ ಇವರು ಇಂತಹ ಜನಾಂಗದವರೆಂದು ಹೇಳುವಂತಿರಬೇಕು.

ಪುಟ 2ರಲ್ಲಿ ಅರೆಭಾಷೆ ಗೌಡರು ಎಂದಿದೆ. ಅರೆಭಾಷೆ ಎಂದರೇನು ? ಹಾಗಾದರೆ ಇದು ಅರೆಭಾಷೆ ಜನಾಂಗವೇ ಎಂಬ ಉದ್ಗಾರ ಬರುವುದು. ಅದಕ್ಕೆ ಕೊಡವ ಗೌಡ ಭಾಷೆ ಎಂದು ಹೇಳುವುದು ಸಮಂಜಸ.

ತಲಕಾವೇರಿ, ಭಾಗಮಂಡಲವನ್ನು ಅಭಿವೃದ್ಧಿಯ ಹೆಸ ನಲ್ಲಿ ಕುಲಗೆಡೆಸುವುದು ಬೇಡ. ಕೊಡಗಿನ ಯಾವುದೇ ಜನಾಂಗ ವಾಗಲಿ ದೇಶದ, ಜಿಲ್ಲೆಯ ಮೂಲ ಸಂಸ್ಕೃತಿಗೆ ಧಕ್ಕೆ ತರಬಾರದು. ಜನಾಂಗ, ಜನಾಂಗವನ್ನು ಹಳಿಯುವ ಕೀಳುಗಾರಿಕೆ ಸಲ್ಲದು. ಆದಷ್ಟು ಹೊಂದಿಕೊಂಡು ಒಂದಾಗಿ ಬಾಳಲು ಕಲಿಯುವುದು ಒಳ್ಳೆಯದು.

ಒಟ್ಟಿನಲ್ಲಿ 'ಕೊಡಗು ಸಂಗಾತಿ' ಒಂದು ಮುಖ್ಯ ಹೆಜ್ಜೆ. ಇದರಿಂದ ಕೊಡಗು ಒಂದಾಗಿ ಜಾತಿ ಭೇದಕ್ಕೆ ಎಡೆಕೊಡದೆ ಬೆಳೆಯಲ್ಲಿ. ಜಾತೀಯತೆ ನಿರ್ಮೂಲವಾಗಲು ಸಹಕರಿಸಲಿ. ಎಲ್ಲಾ ಒಂದಾಗಿ ಬಾಳುವ, ಒಂದಾಗಿ ನಲಿಯುವ.

**ಶುಭಾಶಯಗಳು**

**ಸಿ. ಜಿ. ಕುಶಾಲಪ್ಪ,** ಕುಶಾಲನಗರ.

### ನಿರಂತರವಾಗಿ ಬಾಳಲಿ

ನಿಮ್ಮ ಪತ್ರಿಕೆಯನ್ನು ನೋಡಿ ಅದರಲ್ಲಿರುವ ವಿಷಯ ಗಳನ್ನೆಲ್ಲಾ ಓದಿ ತುಂಬಾ ಸಂತೋಷಪಟ್ಟಿದ್ದೇನೆ.. ಸಧ್ಯ ಗೌಡ ಜನಾಂಗಕ್ಕೆ ನಿಮ್ಮ ಒಂದು ಕೊಡುಗೆಯನ್ನು ಆನಂದದಿಂದ ಸ್ವೀಕರಿಸಿದ್ದೇನೆ. ಮುಖ ಪುಟದಲ್ಲಿ ಕೊಡಗಿನ ನಮ್ಮ ಹಳೇ ಸಂಪ್ರದಾಯದ ಉಡುಗೆ ನೋಡಿ ತುಂಬಾ ಸಂತೋಷವಾಯ್ತು. ನಿರಂತರವಾಗಿ ಬಾಳಲಿ ಎಂದು ಹಾರೈಸುವ,

ಇಂತು ನಿಮ್ಮವ,

**ಕುದುಕುಳಿ ಟಿ. ಸುಬ್ಬಯ್ಯ.**

### ಕೊಡಗಿಗೆ ಸಂದ ಬೆಲೆ

ನಿಮ್ಮ 'ಕೊಡಗು ಸಂಗಾತಿ' ಪಾಕ್ಷಿಕವು ನಮ್ಮನ್ನು ತಲುಪಿತು. ಓದಿ ತುಂಬಾ ಸಂತೋಷವಾಯಿತು.

ನಿಮ್ಮ ಪ್ರತಿಭೆ, ಶ್ರಮ, ತಾಳ್ಮೆ, ಪ್ರೀತಿ ಮುಂತಾದ ಎಲ್ಲಾ ಸದ್ಗುಣಗಳೂ ಈ ಪತ್ರಿಕೆಯಲ್ಲಿ ಜೀವಂತವಾಗಿದೆ. ಒಳ್ಳೆಯ ಪರಿಶ್ರಮದಿಂದ ಹೆಮ್ಮೆಯು ಬಂದರೆ, ಅಭಿಮಾನ ಎಂಬುದು ರಕ್ತಗತವಾಗಿ ಮತ್ತು ಸಂಸ್ಕೃತಿಯ ಮೂಲಕವಾಗಿ ಬರುತ್ತದೆ ಎಂಬುದು ನಿಮ್ಮ ಪಾಲಿಗೆ ಸರಿಯಾಗಿ ಹೊಂದಿಬರುತ್ತದೆ. ಎಂದು ನಮ್ಮೆಲ್ಲರ ಅನಿಸಿಕೆ. ಕೊಡಗಿನ ವೀರಯೋಧರಾಗಿ ಈಗ ಉದ್ಯೋಗಿಯಾಗಿ, ತಮ್ಮಂತಹ ವೀರ ಸೈನಿಕರನ್ನು ಸಂಘಟಿಸಿ ತಾಯ್ನಾಡಿನ ಸೇವೆಗಾಗಿ ಲೇಖನವನ್ನೇ ಆಯುಧವಾಗಿ ಬಳಸಿಕೊಂಡ ನಿಮ್ಮ ಹಿರಿಮೆಗೆ ನಮ್ಮೆಲ್ಲರ ಪ್ರೀತಿ ಇದ್ದೇ ಇದೆ. ಯಾಕೆಂದರೆ ಕೊಡಗಿನ ಪರಂಪರೆಯೇ ಅಂತಹುದಲ್ಲವೆ ? ಎರಡು ವೀರ ಪುತ್ರರನ್ನು ದೇಶಕ್ಕಾಗಿ ಬಲಿದಾನವಿತ್ತ ಹೆಮ್ಮೆಯ ಮಹಾತಾಯಿ ಕಾವೇರಿಯಲ್ಲವೆ? ಹಾಗೂ ಎಲ್ಲರಿಗೂ ಸ್ಫೂರ್ತಿಯಾಗಿ ಕೊಡಗಿನಲ್ಲಿ ನಿಂತವಳು ಅವಳಲ್ಲವೆ?.

ನಿಮ್ಮ ನೂತನ 'ಕೊಡಗು ಸಂಗಾತಿ' ಬೆಳೆದು ಕನ್ನಡಿಗರ ಮನೆಮಾತಾಗಲಿ ಎಂದು ತುಂಬುಹೃದಯದಿಂದ ಆಶಿಸುತ್ತೇನೆ.

**ಅಡ್ಕಾರ್ ಜ್ಯೋತಿ ದೇರಣ್ಣಗೌಡ**

2ನೇ ಪಿ.ಯು.ಸಿ. ವಿದ್ಯಾರ್ಥಿನಿ, ಸುಳ್ಯ.

### ಉತ್ತಮ ಮಾಧ್ಯಮ

ನಿಮ್ಮಿಂದ ಕೊಡಗು ಸಂಗಾತಿ ಪತ್ರಿಕೆ ನನ್ನ ಕೈಸೇರಿ ತುಂಬಾ ಸಂತೋಷವಾಯಿತು. ಈ ಪಾಕ್ಷಿಕ ಪತ್ರಿಕೆಯ ಮೊದಲನೆ ಮತ್ತು ಎರಡನೆ ಸಂಚಿಕೆಗಳು ನನ್ನ ಕೈ ಸೇರಿವೆ. ಇದಕ್ಕೆ ನೀವು ಜನ್ಮಕೊಟ್ಟ ಕೊಡಗಿನ ನಮ್ಮ ಜನಾಂಗಕ್ಕೆ ಅನೇಕ ಮುಖ್ಯ ವಿಷಯಗಳನ್ನು ಪ್ರಸಾರ ಮಾಡುವ, ಜನಶಕ್ತಿ, ಐಕ್ಯತೆ ಸದ್ಭಾವನೆಗಳನ್ನು ಬೆಳೆಸುವ ದೃಷ್ಟಿಯಲ್ಲಿ ನೀವು ಹಾಕಿಕೊಂಡಿರುವ ಮಾಧ್ಯಮಕ್ಕೆ ನನ್ನ ಹೃತ್ಪೂರ್ವಕ ಶುಭಾಶಯಗಳು. ನಿಮ್ಮ ಮಾರ್ಗದರ್ಶನದಲ್ಲಿ ಈ ಪತ್ರಿಕೆಯು ಸರ್ವತೋಮುಖ ಪ್ರಗತಿಯನ್ನು ಪಡೆದು ನಿಮಗೆ ಕೀರ್ತಿಯನ್ನು ತರಲೆಂದು ಹಾರೈಸುತ್ತೇನೆ.

**ಬೈತಡ್ಕ ಎ ಜೋಯಪ್ಪ,**

ಇನ್‌ಸ್ಪೆಕ್ಟರ್ ಆಫ್ ಪೊಲೀಸ್, ಬೆಂಗಳೂರು.

**ಅರೆಭಾಷಿಕ ವಿಭಾಗ :**

# ನೀವೇನ್ ಹೇಳಿರೆ ?

ಇಸ್ಕೂಲ್ ಮಕ್ಕಳಿಗೆಲ್ಲಾ ರಜ ಬಂದದೇ ಬಂದದ್. ಅವುಕೆ ರಕ್ಕೆಪುಕ್ಕ ಬಂದಂಗೆ ಆಗುಟು. ಹಾರ್ದು, ಬೀಳ್ದು, ಮರಹತ್ತದು, ಜಗಳಾಡುದು, ನೆಂಟ್ರ ಮನೆಗೆ ಹೋದು, ಸಿಕ್ಕಿದ್ದೆಲ್ಲಾ ತಿಂಬೋದು, ಕರ್ಟ್ ಪೇರ್ಲ, ಗೊಟ್ಟೆ ಹಣ್, ಹಿಡಂಜಿ ಅಮೆ ಹಣ್ ಹಿಂಗೆ ಅದ್–ಇದ್ ತಿಂದ್ ಕಟ್ರಿ ಹಿಡ್ಸಿಕಂಡವೆ. ಇವುಕೆ ಒಮ್ಮೆ ಇಸ್ಕೂಲ್ ಸುರಾಗಿದರೇಂತ ಅಯ್ಯೆಕ ಬಾಯಿ ಬಡ್ಕಂಡವೆ.

ಅದ್ ಬೇರೆ ಈಗ ಮೊದುವೆ ಸೀಜನ್. ಒಂದೇದಿನದ ಸಮಾರಂಭಂತೇಳಿ ಮೊದುವೆ ಕಾಗದಲಿ ಹಾಕಲಿ, ಬುಡಲಿ ನಾವು ಎರಡ್ ದಿನದ ಸಮಾರಂಭತೇ ತಿಳ್ಕಂಡ್ ಚಪ್ಪರ ದಿನದ ರಾತ್ರೆ ಹೋಗದೆ ಬುಡ್‌ಕಿಲೆ. ಈ ಮಕ್ಕಳೋ ಅಲ್ಲಿ ಇಲ್ಲಿ ಕೈಗೆ ಕಾಲಿಗೆ ಸಿಕ್ಕುದಲ್ಲದೆ ಮೂರ್‌ಕಾಸ್ನ ಕೆಲ್ಸ ಮಾತ್ರ ಮಾಡಿಕಿಲೆ. 'ನೆರೆ ಮನೆಲಿ ಜಂಬರ, ನಮ್ಮ ನಾಯಿಗೆ ಓಡಾಟಂತ' ಹೇಳುವಂಗೆ ಅಲ್ಲಿಂದ ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ಕುಣು ಕುಣು ಓಡಾಡಿಕಂಡೇ ಇದ್ದವೆ. ಸಿಹಿ ಅಡಿಕೆ ಕಂಡ್ ಬುಟ್ಟರೆ ಸೀದ ಹೋದೊ ಎಲೆತಟ್ಟೆಗೆ ಕೈ ಹಾಕಿದೊ. ಒಂದೊಂದು ಹಿಡಿ ಬಾಚಿಕಂಡೊ, ಬಾಯಿಗೆ ತುಂಬಿಕಂಡೊ. ಸಿಹಿನ ಲಾಯಕ ನುಂಗಿದೊ. ಅಡಿಕೇನ ಪುರ್‌ಂತ ಉಗ್ದೊ. ಪುನಃಅಡಿಕೆ ತಟ್ಟೆಗೆ ಓಡ್ದೊ. ತಟ್ಟೇಲಿ ಅಡಿಕೆಲುಟ್ಟಾ? ಅದ್ಕೆ ಕೆಲವು ಈಗೀಗ ಹಸಿ ಅಡಿಕೆನ ಮುಡಿಗಿವೆ. ಕೆಲವು ಅಡಿಕೆ 'ಸೊಕ್ಕಿದೆ'. ಮಕ್ಕ ಸ್ವಲ್ಪ ದೂರಾದವೆ.

ಕೆಲವು ಜನ ಸಮಾರಂಭನ ಹಾಳ್ ಮಾಡಿಕೆ ಬಂದವೆ. ಒಮ್ಮೆ ಹಿಂಗ್ ಆತ್. ಚಪ್ಪರ ದಿನದ ರಾತ್ರೆ. ಊಟಕೆಲ್ಲಾ ರೆಡಿ ಆಗುಟು. ಮನೆ ಯಜಮಾನ ಚೊಂಬುಲಿ ನೀರ್ ಹಿಡ್ಕಂಡ್ "ಊರೋವು, ನಾಡವು, ನೆಂಟ್ರುಗ, ಎಲ್ಲವೂ ಊಟಕ್ಕೇಳಿ"ಂತೇಳ್ತ್. ಹಾಂಗೆ ಹೇಳ್ದು ಒಂದು ಪದ್ಧತಿ ಅಷ್ಟೇ. ಯಜಮಾನ ಹೇಳಿಕೆ ಮುಂದೆ ಜನಗ ಊಟ ದಸೀಟ್ ಹಿಡ್ದ್‌ಬುಟ್ಟಿದ್ದವೆ. ಕೈಗಿಯ್ ತೊಳಿಯೋಕುಂತೇನಿಲ್ಲೆ. ಹೆಂಗೊ ಎಲೆಗೆ ನೀರ್‌ಬುಟ್ಟವಲೆ ! ಸರಿ, ನೀರ್ ಗೀರ್ ಹಾಕಿ ಆತ್. ಒಂದ್‌ಕಡೆಂದ ಇಕ್ಕಿಕೆ ಸುರು ಮಾಡ್ದೊ. ಅಷ್ಟೊತ್ತಿಗೆ ಕಿಣಿಕಿಣಿ ಸದ್ದ್ ಬಾತ್. ತಿರುಗಿ ನೋಡ್‌ದೆ ಟ್ರೇ ತುಂಬ ಗಲಾಸ್‌ಗ. ಅದರ್ಲಿ ಕಲರ್ ನೀರ್ ! (ಬ್ರಾಂದಿಯೋ ವಿಸ್ಕಿಯೋ ಯಂಥದೋ...) ಹಿರಿಯವು ಮುಲಾಜಿಲ್ಲದೆ ಒಂದೊಂದು ಗಲಾಸ್ ತಕ್ಕೊಂಡೋ ಏರ್ಸಿದೊ. ಕೆಲವು ಸರ್ವಿಸಾದ ಹೆಂಗ್ಸುಗಳು ಮೆಲ್ಲ ತಕ್ಕೊಂಡೊ, ಏರ್ಸಿದೊ. ಇನ್ ಕೆಲವುಕೆ 'ಲೈಸನ್ಸ್' ಸಿಕ್ಕದ ಹೈದಂಗ ಅತ್ತ ನೋಡಿವೆ, ಇತ್ತ ನೋಡಿವೆ. ಕೈಹಾಕಿ ತಕ್ಕಂಬಕುತ ಧೈರ್ಯ ಮಾಡಿವೆ. ಆದ್ರೆ ಧೈರ್ಯ ಸಾಲದೆ ಸುಮ್ಮನಾದವೆ.

ಹಿಂಗೆ ಊಟ ಸಾಗ್ತಾ ಉಟ್ಟು. ಕೆಲವು ಬೆವುರ್ತಾ ಫಳೊ. ಇನ್ ಕೆಲವು ಮಾತಾಡ್ತಾ ಒಳೊ. ಮತ್ತೆ ಕೆಲವು ಚೂರ್ ಉಪ್ಪು ಕಮ್ಮಿ ಆತಲಾ? ಹಂಞ ಹುಳಿ ಬೇಕಿತಲಾಂತ ಸೂನೆ ಹೇಳಿಕಂಡ್ ಊಟ ಮಾಡ್ತಾ ಒಳೊ. ಅಷ್ಟೊತ್ತಿಗೆ ನಮ್ಮ ಚಿನ್ನ ಹೈದಂಗು ರಾಜ ಹೈದಂಗೂ ಮಾತಿಗೆ ಮಾತ್ ಬೆಳಿತಾ ಉಟ್ಟು. ಕೊಣಿಯುಕನ ಕಾಲ್ ಮೆಟ್ಟಿಹೋತುಂತೇಳುವ ನೆಪ. ಜನರ ಊಟ ಪೂರ ಆತ್‌ಲೆ. ಮಾತಿಗೆ ಮಾತ್ ಬೆಳ್ತ್. ಚಿನ್ನ ಹೈದನ ಕಡೆ ಒಂದ್ ಗುಂಪು, ರಾಜು ಹೈದನ ಕಡೆ ಇನ್ನೊಂದ್ ಗುಂಪು ಆತ್. ಮಾತ್ ಬೊಯ್ಗಳಾತ್. ನಾಕೈದ್ ವರ್ಷದ ಹಿಂದೆ ಎತ್ತ್‌ದ್‌ಬಾಲಕಡ್ಡಂವ ನೀನ್‌ಂತೇಳಿ ಚಿನ್ನ ಹೈದ ಹಾರಿಹಾರಿ ಬಿದ್ದದೆ. ಕಡೆಗೆ ಪೆಟ್ಟ್ಯಾಟ, ಮೆಟ್ಟ್ಯಾಟ ಜೋರ್ ಜೋರೇ ಆತ್. ಜನ ಊಟಬುಟ್‌ಎದ್ದೊ. ಊಟದ ಬೇಂಚಿಗಿಂಚಿನೆಲ್ಲಾ ದೂಡಿ ಹಾಕಿದೊ. ಕೆಲವು ಬೆಂಚಿಗ, ಸ್ಟೀಲ್ ಕುರ್ಚಿಗೆಲ್ಲ ಮುರ್ದೊ. ಇಕ್ಕಿಕೇಂತ ತರ್ತ ಇದ್ದ ಊಟ ಎಲ್ಲ ಚೆಲ್ಲಾಡಿ ಹೋತು. ಚಪ್ಪರ ಎಲ್ಲಾ ಬಿದ್ದ್‌ಹೋತ್. ಹೆಂಗ್ಸುಗ, ಮಕ್ಕ ಮರಿ ಎಲ್ಲಾ ಅಯ್ಯೋ......ಂತ ಮುರ್ಡಿಕೆ ಸುರು ಮಾಡ್ದೊ. ಯಾರ್ಯಾರಿಗೋ ಸುರಾದ ಜಗಳ ಇನ್ಯಾರಿಗೋ ಹತ್ತಿಕಂಡತ್. ಜನ ಎಲ್ಲ ತಾರಾಮಾರ ಆಬುಟ್ಟೊ. ತಡೇಕೆ ಹೋದವ್ಕೆ, ನೋಡಿಕೆ ಹೋದವ್ಕೆಲ್ಲಾ ಪೆಟ್ಟ್. ಅಲ್ಲಿ ಮಾವನೂ ಲೆಕ್ಕಕಿಲ್ಲೆ, ಬಾವನೂ ಲೆಕ್ಕಕಿಲ್ಲೆ.

ಹೊಟ್ಟೆಗೂ ಇಲ್ಲದೆ, ಬಟ್ಟೆಗೂ ಇಲ್ದೆ ಸಾಲಸೋಲ ಮಾಡಿ ಮದ್ವೆಗೆಂತ ಖರ್ಚ್ ಮಾಡ್ದವರ್ನ ಯಾರ್ಯಾರೋ ದರ್ವೆಸಿಗ ಬಂದ್‌ಕಂಡ್ ಬೇಡಾದ ನೆಪನ ಹುಡಿಕಿಕಂಡ್ ಇಲ್ಲಿ ಜಗಳ ಮಾಡಕ್ಯಾಗಿತ್ತಾ ? ಇವ್ಕೆ ಬೇರೆ ಜಾಗ ಇತ್‌ಲೆಯಾ ? ಈ ಕೆಟ್ಟ ಚಾಳಿನ ಜನ ಬುಡೋಕು. ಬೇರೆಯವು ಸಮಾರಂಭನ ಹಾಳ್ ಮಾಡಿಕೆ ಹೋಕಾಗದ್.

ಸೂನೆ ಹೇಳಿಕಂಡ್ ತಿರುಗುದು, ಸಮಾರಂಭನ ಹಾಳ್ ಮಾಡಿಕೆ ನೋಡ್ದು ಅನಾಗರಿಕರ ಲಕ್ಷಣ. ನೀವೇನ್ ಹೇಳಿರೆ ?

● **ಬಾರಿಯಂಡ ಆರ್. ಜೋಯಪ್ಪ**
ಮದೆ.

# ಗುರ್ತೆ ಸಿಕ್ಕುದುಲೆ

ಅಮ್ಮಿ ಗೂಡೆ ವಿಪರೀತ ಸ್ಟೈಲ್ ಮಾಡ್ವ. ಯಾರ್ ಎಷ್ಟೇ ಹೇಳ್ಡ್ರ ಗನ್ನೈಯೇ ಇಲ್ಲೆ. ಅರ್ಜೆಂಟ್‌ಗೆ ಮನಿ ಎಲ್ಲಿಗಾರ್ ಹೋಕುತೇಳಿರೆ ಅವಳಕ್ಕೈಂದ ಹರೆಕ್ಕಿಲೆ. ಕನ್ನಡಿ ಮುಂದೆ ನಿಂತ್‌ಬುಟ್ರೆ ಒಂದ್ ಗಂಟೆ ಬೇಕ್. ಒಂದು ಸೇರಿ ಮಾಡ್ಕನ ಮತ್ತೊಂದು ಸೇರಿ ಆಕಿಲೆ. ಅವ್ಳ ಗತಿಗೆಗೊಂದು ಸ್ಟೈಲ್ ಮಾಡ್ವೆ. ಟಿ.ವಿ. ನೋಡ್ರೆ, ರೇಡಿಯೊ ಕೇಳ್ರೆ, ಪೇಪರ್ ಓದಿರೆ, ಯಾರ್ ಹೆಂಗೆ ಸ್ಟೈಲ್ ಮಾಡಿವೆ, ಅಂಗಡಿಗೆ ಯಾವ ಹೊಸ ಸ್ಟೈಲ್ ಸರ್ಕ್‌ಗ ಬಂದವೆ, ಅಷ್ಟೇ ತಿಳ್ಕಂಬೊದು, ಮಾರ್ನೆದಿನ ಅದರ್ನ ತಾದು. ಯಾರಾರ್ ವಿರೋದ್ಸಿರೆ, ನೀವ್ ಥೇಟ್ ಹಳ್ಳಿಗುಗ್ಗುಗಂತೇಳಿಯೋ, ಪಂಡ್‌ನ ಕಾಲದವ್ರುತೇಳಿಯೋ ಹೇಳಿಬುಡ್ವ. ಅವ್ಳೂ ಇರ್ವ ಹಳ್ಳಿಲೆ.

ಅಮ್ಮಿಒಬ್ಳೇಯೇನ್ ಸ್ಟೈಲ್‌ಮಾಡ್ವ ಅಲ್ಲ. ಅವರ್ದ್ ಒಂದು ಕೂಟೇ ಇತ್ತ್. ಒಂದಿನ ಆ ಕೂಟೊವು ಎಲ್ಲಾ ಸೇರಿ ಮೊದುವೆಗೆ ಹೋಕೆ ನಿಶ್ಚಯ ಮಾಡ್ವೊ. ಅಂದ್ ಅಮ್ಮಿಗೆ ಬೆಳ್ಗಿಂದ ರೆಸ್ಟೇ ಇಲ್ಲೆ. ಒಂದು ಸಲ ಮುಖಕ್ಕೆ ಎಂತೆಲ್ಲೋ ಮೆತ್ತಿಕೊಂಡ್ವ, ಅದ್ ಸರಿ ಆತ್ಲೆಂತ ಪುನಃ ಮುಖ ತೊಳಿಯೊದು. ಕೊನೆಗೂ ಬಾಬ್‌ಕಟ್ ಗೂಡೆ, ತುಟಿಗೆ ಕೆಂಪು ಹಾಕಿ, ಮುಖಕ್ಕೆ ಎಂತದೆಲ್ಲೋ ಬೊಳ್ಕಂಡ್, ಎರಡ್ ಗೇಣ್ ಉದ್ವದ ಮಿಡ್ಡಿ ಹಾಕಿ ಅರ್ಧಅಡಿ ಹೀಲ್ಡ್ ಚಪ್ಪಲ್ ಹಾಕಿ ಪುನೊಮ್ಮೆ ಕನ್ನಡಿ ಮುಂದೆ ಹೋಗಿ ನಿಲ್ಲ್‌ಕಾಕನ, ಮಾಮೂಲ್ ಅರ್ಧಗಂಟೆ ಲೇಟಾಗಿ ಬರುವ ಬಸ್ಸ್, ನೆನಿಸನಿಂತೇಳಿ ಐದ್‌ನಿಮಿಷ ಮೊದ್ಲೇ ಬರೊಕಾ, ಅಮ್ಮಿಗೆ ಈಗ ಓಡಿಕಾದೇ? ಓಡ್ರೆ ಈ ಸೆಖೆಗೆ ಮುಖಲಿದ್ದ ಪೌಡ್ರು ನಿತ್ತದೆ? ಅಂತು ಬಸ್ಸ್ ಹೋತ್ ಅಮ್ಮಿ ಇಲ್ಲೇ ಆತ್, ಕೂಟವುವೆಲ್ಲ ಹೋದವು ಹೋಗೇ ಬುಟ್ಟೊ.

ತಕ್ಕಣೇ ಈಗ ಅಮ್ಮಿಗೆ ಸಿಟ್ಟ್‌ಬಂದ್ ಬುಟ್ರೆ ಯಾರಿಗೆ ಹೇಳ್ವ, ಅತ್ತೆಮೇಲೆ ಸಿಟ್ಟ್ ಕೊತ್ತಿ ಮೇಲೆ ತೀರಿಸ್ಕೊಂಡಂತ ಹೇಳ್ವಂಗೆ, ಇವ್ಳು ಮನೆಯವರ ಮೇಲೆ ತೀರ ಹಾರಾಡಿ, ದುಂಡು ಹೊತ್ಕಂಡ್, ಬಟ್ಟೆಗಿಟ್ಟೆ ತೀರಾ ಎಳ್ದ್ ಹಾಕಿ ರಂಪಮಾಡಿಬುಡ್ತ್, ಅವ್ಳ ಪರ್ದಾಟ ಯಾರಿಗೆ ಹೇಳ್ವ. ಅಷ್ಟೊತ್ತಿಗೆ ಇನ್ನೊಂದು ಬಸ್ ಬಾಕಾತ್. ಇವ್ಳಗೆ ಮೊದುವೆಗೆ ಹೋಕೆ ಮನ್ಸುಟ್ವ. ಮತ್ತೊಮ್ಮೆ ಮೊದ್ಲ ಹೇಳ್ದಂಗೇ ರೆಡಿ ಆತ್. ಬಸ್ ಸ್ಟ್ಯಾಂಡಿಗೆ ಹೋದರೆ ತೀರಾ ಜನ ಇವ್ಳನೇ ನೋಡ್ವ. ಇವ್ಳಗೂ ಮನ್ಸೊಳಗೆ ಒಂತರಾ ಖುಷೀ ಆಗ್ತುಟ್ವ. ಅಂದರೂ ಅದರ್ನ ತೋರ್ಸಿಕಂಬೊದೆ ತಲೆ ಅಡಿಗೆ ಹಾಕಂಡ್ ನಿತ್ತ್‌ರಣ್ತ್.

ಹತ್ತ್‌ನಿಮಿಷ ಲೇಟಾಗೇ ಬಸ್ಸ್‌ಬಾತ್ ಮೊದುವೆ ಸೀಜನ್, ಮಕ್ಕಳಿಗೆ ರಜೆ, ಮನೇಲಿ ಕೆಲ್ಸ ಮಾಡ್ವೆ, ಅಮ್ಮಿನಂತವರ ನೋಡಿಕೆಂತೇಳಿ ಬರುವ ಹೈದಂಗ ಎಲ್ಲಾ ಸೇರಿ, ಬಸ್ಸ್‌ಗೆ ಮುತ್ತಿ ಬುಟ್ಟಂಗೆ ಜನ ಒಳೊ. ಒಳಗೆ ಸ್ವಲ್ಪ ಜಾಗ ಇದ್ವರೂ ಬಾಗ್ಲ್‌ಲಿ ನೇತಾಡವೆ ಜಾಸ್ತಿ. ಬಸ್ ನಿಲ್ಲ್‌ಕಾಕನೆ ಜನ ಎಲ್ಲ ಓಡ್ವೊ, ಅಮ್ಮಿನೂ ಪಟಕ್ ಪಟಕ್‌ತೇಳಿ ಹೆಜ್ಜೆ ಹಾಕಂಡ್ ಹೋತ್, ಹೋದರೆ ಅವರ ಸೆರೇ ನುಗ್ಗಿಕಾದೆ ? ಒಂದ್ ಕಾಲ್ ಬಸ್ಸ್‌ಲಿ ಇಟ್ವ, ಇನ್ನೊಂದು ಕಾಲ್‌ನ ಎಳ್ದರೆ ಎತ್ತಿಬಾದೇಲೆ, ಆ ಕಾಲ್‌ನ ಚಪ್ಪಲ್ ಮೇಲೆ, ಯಾರ್ದ್ವೋ ಕಾಲ್ ಇತ್ತ್, ಜೋರಾಗಿ ಕಾಲ್‌ನ ಎತ್ತಿತ್, ಚಪ್ಪಲ್ ಬಾರ್ ತುಂಡ್ ಆತ್. ಚಪ್ಪಲ್ ಹೆರ್ಕಣಿಕೆ ಕೆಳ್ಗೆ ಇಳ್ವುಟು. ಬಾಗ್ಲ್‌ಲಿದ್ದ ಮರಿಕಂಡಕ್ಟರ್ ರೈಟ್ ರೈಟ್‌ತ ಹೇಳ್ವೊ. ಬಸ್ಸ್ ಹೊರ್ಟುಹೋತು.

ಅಮ್ಮಿನ ಫಜೀತಿ ಯಾರಿಗೆ ಹೇಳ್ವ, ಉಳ್‌ದವು ಅವ್ಳ್ನೇ ನೋಡ್ವ, ಚಪ್ಪಲ್‌ನ ಸರಿಮಾಡಿಕೆ ಬಗ್ಗಿರು, ಎರಡ್‌ಗೇಣ್ ಉದ್ವದ ಮಿಡ್ಡಿ ಹಾಕಂಡ್ ಬಗ್ಗಿಕೆ ಹೋದರೆ ಮರ್ಯಾದೆ ಹೋದೆ, ಈಗ ಎಂತ ಮಾಡಿಕೂ ಉಪಾಯಕಾಣದೆ ಬೆವ್ರುತುರ್ಟುಟ್ವ. ಮೊದುವೆ ಮನೆ ಮರ್ತೇ ಹೋವ್ರುಟು. ನೋಡುವ ಹೈದಂಗಳಿಗೆ ಮನ್ಸ್‌ಲೇ ಬೈಕಂಡ್ ಒಮ್ಮೆ ಮನೆ ತಲ್ಪಿರೆ ಸಾಕ್‌ತೇಳಿ ಕಾಲ್‌ಲಿ ಚಪ್ಪಲಿನ ತೆರ್ಕ್ಸಿಕಂಡ್ ನಾಲ್ಕ್ ಹೆಜ್ಜೆಹೋವ್ರುಟೊ, ಇಲ್ಲೆ, ಇನ್ನೊಂದು ಕಾಲ್‌ದ್ ಚಪ್ಪಲ್ ಲಟಕ್‌ತೇಳಿ ತಿರ್ಗಿತ್, ಅಂಗಾಲ್ ಒಮ್ಮೆ ಆಕಾಶ ನೋಡ್ತ್, ಸ್ಟೈಲ್ ಎಲ್ಲ ನೆಟ್ಟಂಗಾತ್, ಅಮ್ಮಿಗೆ ಜೂವ ಹೋದಂಗಾತ್, ಹೆಂಗೆಲ್ಲೋ ಕುಂಟಿಕಂಡ್ ಬಂದ್ ಮನೆಗೆಬಿತ್, ಮಾರನೆ ದಿನಂದ ಕಾಲ್‌ಊದಿತ್ ನೋಡಿ. ಕಾಲಿಗೆ ಗೂಟ ಹೊಡ್ದ್, ಅಜ್ಜಿ ಕೈಲಿ ಕಡ್ಸಿ, ಎಂತಲ್ಲೋ ಮಾಡ್ವೊ ಮಾಡಿ ಪ್ರೇಜನ ಕಾಣದೆ, ಆಸ್ಪತ್ರೆ ಹತ್ತಿದ ಮೇಲೆ ಕಾಲ್ ವಾಸಿ ಆತ್.

ಇದೆಲ್ಲ ನೆಡ್ದ್ ಒಂದವರ್ಷ ಆತ್, ಇಂದ್ ನೀವ್ ಅಮ್ಮಿನ ನೋಡ್ರೆ ಗುರ್ತೆ ಸಿಕ್ಕುದುಲೆ, ಸೊಂಟದ ಕೆಳ್ಗೆ ಜಡೆ, ಹಣೆಗೆ ಬೊಟ್ವ, ಕೈಗೆ ಬಳೆ, ಮೈತುಂಬಾ ಬಟ್ಟೆ ಹಾಕಂಡ್ ಸ್ಟೈಲ್ ಮಾಡೋಕು, ಅಂದರೆ ಅದ್ಕೆ ಮಿತಿ ಬೇಕುಂತ ಅಮ್ಮಿ ಗೂಡೆ ಹೇಳ್ವೆ.

● ಪಟ್ಟಡ ಶಿವಕುಮಾರ್

## ಕೊಡಗ್‌ನ ಗೂಡೆ

ಕೊಡಗ್‌ನ ಗೂಡೆನ ಬೆಡಗ್‌ನ ನೋಡಿಕೆ
ಸಡಗರನ್‌ದ ಬಾ ಮೊದು ಮಂಜ್ಞನೇ
ನಡುವನ್ ಬಳ್‌ಕಿಸಿ ನಡೆಯುವ ಗೂಡೆನ
ಕಡು ಕೋಮಲ ಬೆಳಿ ಒಡಲೇನ್
ಉಡುಗೆನ ತೊಡುಗೆನ ಬೆಡಗ್‌ನ ಗೂಡೆನ
ಉಡುಪತಿ ವದನೆನ ಸೊಬಗೇನ್
ಕೊಡಗ್‌ನ ಬೆಟ್ಟದ ಮೆಟ್ಟಲ್ ಇಳಿವ
ಕಡು ಜವ್ವನೆ ಹೊಸತನು ಏನ್
ಕಿತ್ತಳೆ ತೋಟದ ಹಕ್ಕಲೆ ಬಂದ್
ಸುತ್ತಲ್ ನೋಡುವ ಪೊರ್ಲೇನ್
ಮುತ್ತ್‌ನ ಮಾಲೆನ ಕತ್ತ್‌ಲಿ ಹಾಕಿ
ಮೆತ್ತಂಗೆ ನಡೆ ಮದಕರಿ ಏನ್
ಕಾಫಿ ತೋಟದ ದೈಗಳ ಎಡೆಲಿ
ನಡೆವಂಥ ಸಂಭ್ರಮ ಆದ್ ಏನ್
ಕಾವೇರಮ್ಮನ ಭೂಮಿಲಿ ಹುಟ್ಟಿ
ಬೆಟ್ಟದ ನಾಡ್‌ಲಿ ಬೆಳ್ದದ್ ಪುಷ್ಪಂ
ಮಾತಿಗೆ ಹೊರಟರೆ ಪ್ರೀತಿ ಅದೇನ್
ನೋಟಕ ಪುತ್ಥಳಿ ಬೊಂಬೇನ್
ಧೀರರ ವೀರರ ಸ್ವಾತಂತ್ರ್ಯದ
ಹೋರಾಟದ ಕೆಚ್ಚಿದೆ ಜೆನರೇನ್
ಪಡುವಣ ಘಟ್ಟದ ಸಾಲ್‌ಲಿ ಹುಟ್ಟಿದ
ಗಂಧದ ಘಮ ಪರಿಮಳ ಏನ್
ಕಿತ್ತಳೆ ಹಣ್ಣ್‌ನ ಬಣ್ಣದ ಹೆಣ್ಣ್‌ನ
ಚಿತ್ರದ ಹೆಣ್ಣ್‌ನ ಹಾಂಗೇನ್
ತಾವರೆ ಎಸಳ್‌ನ ಕಣ್ಣ್ ಅದೇನ್
ಸಂಪಗೆ ಮೊಗ್ಗಿನ್ ಮೂಕೇನ್
ಕೊಡಗ್‌ನ ಗೂಡೆನ ಬೆಡಗ್‌ನ ನೋಡಿಕೆ
ಸಡಗರನ್‌ದ ಬಾ ಮೊದು ಮಂಜನೇ

● ಇ.ಜಿ. ಅಡಪಂಗಾಯ, ಅಜ್ಜಾವರ.

## ಹೂ ಮಾರಿಕ್ಕೋದ ಗೂಡೆ

### ಮನೆಗೆ ಬಾತ್‌ಲ್ಲೆ !

ಹೂ ಮಾರಿಕ್ಕೋದ ಗೂಡೆ ಮನೆ ಬಾತ್‌ಲ್ಲೆ ।
ಕತ್ತಲಾತ್ ಎಲ್ಲಿಗೋತ್ ನಂಗೆ ಗೊತ್ತಿಲ್ಲೆ ॥

ಕಮಲಗೂಡೆ ಮನೇಲಿ ಇಲ್ದೆ ಬಾಳ ಬೇಜಾರ್ ।
ಸಮಯ ಕಳೇದು ಹೆಂಗತಾ ನಂಗೆ ಗೊತ್ತಿಲ್ಲೆ ॥

ಮನೆ ತುಂಬಾ ಕೊಣ್ಕಂಡ್‌ದ್ದರೆ ಎಸ್ಟು ಲಾಯಕಿತ್ತ್ ।
ಹೋದಲೆಲ್ಲಾ ಒಳ್ಳೇ ಸದ್ದ್ ಕೇಳಿ ಬರ್‌ತ್ತಿತ್ ॥

ಕೊಜ್ಞರಾಗಲಿ ಮಂಜ್ಞಣೆ ಬಾಕನ ಹೆಂಗ್‌ಹಾಡ್ತ್‌ತ್ತ್ ॥
ಅದರ್ನ ಕೇಳ್‌ಕೆ ಎಸ್ಟ್ ಪೊರ್ಲಿತ್ತ್ ॥

ಕಾಸ್ ಕೊಟ್ರೆ ಬ್ಯಾಡ ತೇಳುವ್‌ವ ಗೂಡೆ ।
ಹತ್ತ್ ರೂಪಾಯಿ ನೋಟ್ ಕೊಟ್ರೆ ಲಲ್ಲಲಲ್ಲಲಾ ॥

ಹೊತ್ತಾರೆ ಏಳಿಕ್ಕೆ ಮುಂದೆ ಕಾಫಿ ಕೊಡ್ತಿತ್ತ್ ।
ಕುಡ್ದ್ ಕೊಡ್‌ಕನ ಮಿಣಿಕೆ ನಂಗೆ ಹಾರ್‌ತ್ತಿತ್ತ್ ॥

ಚೆಂಣುನಂಗೆ ಬಂದ್ ಜೋಬಿಗೆ ಕೈ ಹಾಕ್‌ತ್ತಿತ್ತ್ ।
ನನ್ನ ಜೋಬ್ ಖಾಲಿ ಮಾಡ್‌ತ್ತಿತ್ ॥

ಕಿಲಕಿಲ ನಕ್ಕಂಡ್ ಹತ್ರಬಾಕನ ಖುಶಿ ಆತಿತ್ತ್ !
ಎಳ್ಕಂಡ್ ಕೂರ್ಸಿದರೆ, ಓಡ್‌ಕನ ಸಿಟ್ಟ್‌ಬಾತಿತ್ತ್ ॥

ಸುಟ್ಟ ಗೂಡೆ ಎಲ್ಲಿಗೊತ್ ಇನ್ನ್ ಬಾತ್‌ಲ್ಲೆ ।
ಕತ್ತಲಾಕನ ಹೆದ್ರಿಕೆ ಆದು ಅವ್ಳಿಗೆ ಗೊತ್ತಿಲ್ಲೆ ॥

ಗಂಡ ತೇಳುವ ಹೆದ್ರಿಕೆ ಇದ್ರೆ ಬ್ಯಾಗ ಬರ್‌ತ್ತಿತ್ತ್ ।
ಹೊತ್ತಿಗೆಬ್ಯಾಗ ಮನೆಗೆ ಬಂದ್ ದೀಪಹಚ್ಚ್‌ತ್ತಿತ್ತ್ ॥

ಹೂ ಮಾರಿಕ್ಕೋದ ಗೂಡೆ ಮನೆಗೆ ಬಾತುಲ್ಲೆ ।
ಕತ್ತಲಾತ್ ಎಲ್ಲಿಗೋತ್ ನಂಗೆ ಗೊತ್ತಿಲ್ಲೆ ॥

● ಬೊಬ್ಬರಿಗೊಂಬೆ, ನಿಮ್ಮ ಅನಂತ
ಗಾಳಿಬೀಡು.

## "ಕೊಡಗು ಸಂಗಾತಿ" ಪತ್ರಿಕೆಗೆ ಶುಭಾಶಯಗಳು....

ಈ ಪತ್ರಿಕೆ ನಮ್ಮ ಗೌಡ ಜನಾಂಗದ ಅಭ್ಯುದಯಕ್ಕೆ ಸೀಮಿತವಾದ್ದರಿಂದ ನಮಗೆ ಹೆಮ್ಮೆಯ ವಿಷಯ. ಈ ಪತ್ರಿಕೆಯು ನಮ್ಮ ಯುವ ಜನಾಂಗಕ್ಕೆ ದೀಪವಾಗಲಿ ಎಂದು ಹಾರೈಸುವ

ಯಿಂದ :

**ಕೊಡಗನ ಬಿದ್ದಪ್ಪ ಬಾಲಕೃಷ್ಣ**
**ಶ್ರೀಮತಿ ಲಲಿತ ಬಾಲಕೃಷ್ಣ**
ಕುಮಾರ ಚಂದನ್ ಬಾಲಕೃಷ್ಣ
ಕುಮಾರಿ ರಚನಾ ಬಾಲಕೃಷ್ಣ

241/1 ರೈಲ್ವೆ ಕಾಲೋನಿ, (ಸೂರ್ಯ ಬೇಕರಿ ಹತ್ತಿರ)
ಮೈಸೂರು-16. ದೂರವಾಣಿ-410164.

## 'ಕೊಡಗು ಸಂಗಾತಿ' ಪತ್ರಿಕೆಯು

ಜನಾಂಗದ ಪ್ರತಿಯೊಬ್ಬರು ಕೊಂಡು ಓದುವಂತಾಗಲಿ, ಪತ್ರಿಕೆಯನ್ನು ಧೈರ್ಯ ಹಾಗೂ ಸ್ಥೈರ್ಯದಿಂದ ಹೊರತಂದ ಸಂಪಾದಕರಿಗೂ ಮತ್ತು ಪತ್ರಿಕೆಗೂ ಯಶಸ್ಸು ಸಿಗಲಿ ಎಂದು ನಾವುಗಳು ಶುಭವನ್ನು ಕೋರುತ್ತೇವೆ....

ಯಿಂದ :

**ಶ್ರೀ ಹುಲಿಮನೆ ಓಂಕಾರಪ್ಪ ರಮೇಶ್,**
**ಶ್ರೀಮತಿ ಹುಲಿಮನೆ ಗುಣಾವತಿ ರಮೇಶ್**

ವಿಳಾಸ :

99/1, 7ನೇ ಮುಖ್ಯ ರಸ್ತೆ,
ವಿನಾಯಕನಗರ, ಮೈಸೂರು-12.

### ಜಾಹೀರಾತುದಾರರ ಗಮನಕ್ಕೆ

| | |
|---|---|
| ಹಿಂದಿನ ಒಳಪುಟಕ್ಕೆ | ರೂ. 1500 |
| ಮುಂದಿನ ಒಳಪುಟಕ್ಕೆ | ರೂ. 1000 |
| 1/2 ಪುಟಕ್ಕೆ | ರೂ. 500 |
| 1/4 ಪುಟಕ್ಕೆ | ರೂ. 250 |
| ಕನಿಷ್ಟ ಪುಟಕ್ಕೆ | ರೂ. 150 |

ನಮ್ಮ ಪತ್ರಿಕೆಗೆ ಚಂದಾದಾರರಾಗಿಯೂ, ಜಾಹೀರಾತುಗಳನ್ನು ನೀಡಿಯೂ ಮತ್ತು ಒಲೆಗೊಂದರಂತೆ ಕೊಂಡು ಓದುವುದರ ಮೂಲಕ ಪ್ರೋತ್ಸಾಹಿಸಬೇಕಾಗಿ ವಿನಂತಿ.

– ಸಂ.

## "ಕೊಡಗು ಸಂಗಾತಿ"ಗೆ ಶುಭಾಶಯಗಳು

ಪತ್ರಿಕೆಯು ಅತ್ಯಂತ ಯಶಸ್ಸಿನ ಕಡೆ ಸಾಗಲಿ ಎಂದು ಶುಭ ಕೋರುವ

**ಶ್ರೀ ಆಜಡ್ಕ ಧನಂಜಯ ಮತ್ತು**
**ಶ್ರೀಮತಿ ವಿಜಯ ಧನಂಜಯ**
ಹಾಗೂ
ಕುಮಾರಿ ಸೌಮ್ಯ, ಕುಮಾರಿ ಶಿಲ್ಪಾ

473, 3ನೇ ಮುಖ್ಯ ರಸ್ತೆ, 4ನೇ ಹಂತ,
ಟಿ.ಕೆ. ಬಡಾವಣೆ, ಕುವೆಂಪುನಗರ, ಮೈಸೂರು-9.

# ಕೊಡಗು ಸಂಗಾತಿಗೆ ಶುಭಾಶಯಗಳು

ನೀವು ಈ ಸಾಹಸಕ್ಕೆ ಕೈ ಹಾಕಿದ್ದೀರಿ. ಬಹಳ ಸಂತೋಷ.

ಧೈರ್ಯದಿಂದ ಮುನ್ನುಗ್ಗಿ.



ಯಿಂದ :

ಬಾಳಾಡಿ ಚಿಣ್ಣಪ್ಪ ಉತ್ತಯ್ಯ
(ಪಶುಪಾಲನಾ ಇಲಾಖೆ, ಮೈಸೂರು.)

ಶ್ರೀಮತಿ ಲಕ್ಷ್ಮಿ ಉತ್ತಯ್ಯ
(ತೋಟಗಾರಿಕೆ ಇಲಾಖೆ.)

ಹಾಗೂ

ಕುಮಾರಿ ಬಾಳಾಡಿ ಉತ್ತಯ್ಯ ಮೀರ

ಕುಮಾರ ಬಾಳಾಡಿ ಉತ್ತಯ್ಯ ಸೋಮೇಶ್ (ಪಾಪಣ್ಣ)

ಶ್ರೀಮತಿ ಮಂಜುಳ ಭರತ್

ವಿಳಾಸ :

'ಲಕ್ಷ್ಮಿ ನಿಲಯ', ಮನೆ ನಂ. 2820/1,
1ನೇ ಕ್ರಾಸ್, ಚಾಮುಂಡಿಪುರಂ, ಮೈಸೂರು.
ದೂರವಾಣಿ – 32292.

Edited, Published and Owned by PATTADA P. SHEELAMANI, Published at No. 322, Bhogadi Circle, Hinkal Post, Mysore-570017.
Printed at ASHIRWAD PRINTERS, 180/A, 6th Main, Vinayakanagar, Mysore-570012.